ಬಸವಾದಿ ಶರಣರ

# ವಚನ ಸಾಹಿತ್ಯ-ತತ್ತ್ವಜ್ಞಾನ



• ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥

# ವಚನ ಸಾಹಿತ್ಯ ಮತ್ತು ತತ್ತ್ವಜ್ಞಾನ


ಸಂಪಾದಕರು :

**ಪ್ರೊ. ಸಿದ್ಧಣ್ಣ ಲಂಗೋಟಿ** (ಚಾಂದಕವಠೆ)

ಎಂ.ಎ.(ತತ್ವಜ್ಞಾನ),ಎಲ್ಎಲ್.ಬಿ.(ಸ್ಪೇಶಲ್),
ಎಂ.ಎ.(ಹಿಂದಿ), ಎಂ.ಎ. (ಕನ್ನಡ)
ಸಿ.ವಾಯ್.ಇಡಿ. (ಯೋಗ ಶಿಕ್ಷಣ)

ಗೌ॥ ಸಂಪಾದಕರು, 'ಬಸವ ಬೆಳಗು' ಪತ್ರಿಕೆ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ






೨೦೨೨

ಜಗಜ್ಯೋತಿ ಬಸವೇಶ್ವರ ಅನುಭಾವಪೀಠ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ

# ವಚನ ಸಾಹಿತ್ಯ ಮತ್ತು ತತ್ತ್ವಜ್ಞಾನ

ಲೇಖಕರು : **ಪ್ರೊ. ಸಿದ್ಧಣ್ಣ ಲಂಗೋಟಿ** (ಚಾಂದಕವಠೆ)
ಎಂ.ಎ.(ತತ್ವಜ್ಞಾನ),ಎಲ್‌ಎಲ್.ಬಿ.(ಸ್ಪೇಶಲ್),
ಎಂ.ಎ.(ಹಿಂದಿ), ಎಂ.ಎ. (ಕನ್ನಡ)
ಸಿ.ವಾಯ್.ಇಡಿ. (ಯೋಗ ಶಿಕ್ಷಣ)
ಗೌ॥ ಸಂಪಾದಕರು, ಬಸವ ಬೆಳಗು ಪತ್ರಿಕೆ
ರಾಮದುರ್ಗ-೫೯೧ ೧೨೩. ಜಿ॥ ಬೆಳಗಾವಿ



ಪ್ರಕಾಶಕರು : **ಜಗಜ್ಯೋತಿ ಬಸವೇಶ್ವರ ಅನುಭಾವಪೀಠ**
**ಬಸವ ಬೆಳಗು, ಮಹಾಂತೇಶ ನಗರ,**
**ರಾಮದುರ್ಗ-೫೯೧ ೧೨೩.** ಜಿ॥ ಬೆಳಗಾವಿ

ಪ್ರಥಮ ಮುದ್ರಣ : ೨೦೨೨

ಪ್ರತಿಗಳು : ೧೦೦೦

ಪುಟಗಳು : iv + ೩೨ = ೩೬

ಪೇಪರ ಬಳಸಿದ್ದು : ಮ್ಯಾಪ್ಲಿಥೋ ಮತ್ತು ಆರ್ಟ ಕಾರ್ಡ ಕವ್ಹರ ೨೫೦ ಜಿ.ಎಸ್.ಎಂ.

ಬೆಲೆ : **ನಾಲ್ವವತ್ತು ರೂಪಾಯಿಗಳು ₹ ೪೦/-**

ಮುಖಪುಟ ವಿನ್ಯಾಸ : ಶ್ರೀ ರವೀಂದ್ರ ವಿಶ್ವಜ್ಞ, ಧಾರವಾಡ.

ಮುದ್ರಕರು : **ಶ್ರೀ ಹುಚ್ಚೇಶ್ವರ ಆಫ್‌ಸೆಟ್ ಪ್ರಿಂಟರ್ಸ**
**ರಾಮದುರ್ಗ-೫೯೧ ೧೨೩.** ಜಿ॥ ಬೆಳಗಾವಿ
ಜಂಗಮವಾಣಿ : ೯೦೩೬೬ ೬೬೬೪೨

# ಪರಿವಿಡಿ

## ವಚನ ಸಾಹಿತ್ಯ ಮತ್ತು ತತ್ತ್ವಜ್ಞಾನ

ಬಸವಣ್ಣನವರು ೮೦೦ ವರ್ಷಗಳ ಹಿಂದೆ ತಿಳಿಸಿದ ಮತ್ತು ಆಚರಿಸಿದ ಎಲ್ಲ ತತ್ವಗಳನ್ನು ಕಾರ್ಯರೂಪಕ್ಕೆ ತರಲು ನನ್ನಿಂದ ಸಾಧ್ಯವಿಲ್ಲ. ಅವುಗಳಲ್ಲಿನ ಕೆಲವೊಂದನ್ನು ಸ್ವೀಕರಿಸಿದ್ದೇನೆ. ನಾನು ಅವುಗಳಲ್ಲಿ ಪರಿಪೂರ್ಣತೆ ಸಾಧಿಸಿಲ್ಲ, ಸಾಧನೆಯ ಹಂತದಲ್ಲಿದ್ದೇನೆ. **ಅಸ್ಪೃಶ್ಯತಾ ನಿವಾರಣೆ** ಮತ್ತು **ಕಾಯಕ ಗೌರವ** ಅವರ ಮುಖ್ಯ ಕಾರ್ಯಕ್ರಮಗಳಲ್ಲಿ ಇದ್ದವು. ಅವರ ಅರಿವು ಮತ್ತು ಆಚಾರಗಳಲ್ಲಿ ಜಾತೀಯತೆಯ ನೆರಳು ಕೂಡ ಕಾಣಲು ಸಾಧ್ಯವಿಲ್ಲ. ಅವರು ನಮ್ಮ ಕಾಲದಲ್ಲಿ ಬದುಕಿದ್ದರೆ ಪೂಜಾರ್ಹ ಸಂತರಾಗಿರುತ್ತಿದ್ದರು. ಅವರ ಅನುಯಾಯಿಗಳಾದ ನೀವು ಅವರ ತತ್ವಗಳನ್ನು ಆಚರಣೆಗೆ ತಂದರೆ ಭಾರತವನ್ನಷ್ಟೇ ಅಲ್ಲ ಇಡೀ ಜಗತ್ತನ್ನೇ ಮೇಲಕ್ಕೆತ್ತಬಲ್ಲಿರಿ.

**-ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ**

(೧೯೨೪ ರಲ್ಲಿ ಬೆಳಗಾವಿಯ ಎ.ಐ.ಸಿ.ಸಿ ಅಧಿವೇಶನದ ಅಧ್ಯಕ್ಷೀಯ ಭಾಷಣ)

॥ ಓಂ ಶ್ರೀ ಗುರು ಬಸವಲಿಂಗಾಯ ನಮಃ ॥

# ವಚನ ಸಾಹಿತ್ಯ ಮತ್ತು ತತ್ತ್ವಜ್ಞಾನ

✡ **ಪ್ರೊ. ಸಿದ್ಧಣ್ಣ ಲಂಗೋಟಿ (ಚಾಂದಕವಠೆ)**
ಶರಣ ಸಾಹಿತಿಗಳು, ಬಸವಬೆಳಗು, ರಾಮದುರ್ಗ-೫೯೧ ೧೨೩. ಜಿ. ಬೆಳಗಾವಿ

**[ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ ಕಲಬುರ್ಗಿ ಹಾಗೂ ಬಸವ ಸಮಿತಿ ಬೆಂಗಳೂರು ಇವರ ಸಂಯುಕ್ತಾಶ್ರಯದಲ್ಲಿ ದಿನಾಂಕ: ೨೫-೦೩-೨೦೨೨ರಂದು ಜರುಗಿದ 'ವಚನಗಳ ವೈವಿಧ್ಯಮಯ ಆಯಾಮಗಳು' ಕುರಿತು ವಿಚಾರ ಸಂಕಿರಣದಲ್ಲಿ ನೀಡಿದ ಉಪನ್ಯಾಸ]**

## ೧) ತತ್ತ್ವಜ್ಞಾನದ ಉಗಮ :

ಇಂದಿನ ವಿಜ್ಞಾನಿಗಳ ಪ್ರಕಾರ ಸಾವಿರಾರು ಕೋಟಿ ವರುಷಗಳ ಹಿಂದೆ ವಿಶ್ವದ ಮಹಾಬಯಲಿನ - ಅಂತರಾಳದಲ್ಲಿ ಒಂದು **ಮಹಾಸ್ಫೋಟ** ಘಟಿಸಿತು. ಇದನ್ನು Big-bang theory ಎಂದು ಹೇಳಲಾಗಿದೆ. ಆಗ ಅಪಾರವಾದ ಉಷ್ಣ - ಬೆಳಕಿನ ರೂಪದ ಶಕ್ತಿ ಹೊರಹೊಮ್ಮಿತು. ಅಂದಾಜು ೧೪೦೦ಕೋಟಿ ವರುಷಗಳ ಹಿಂದೆ ಘಟಿಸಿದ ಈ ಮಹಾಸ್ಫೋಟದ ನಂತರ, ಆ ಮಹಾಬೆಳಕಿನ ಶಕ್ತಿಯು ತಂಪಾಗುತ್ತಾ, ಘನೀಭೂತವಾಗುತ್ತಾ, ವಿಭಜಿತವಾಗುತ್ತಾ, ಕೂಡುತ್ತಾ ಅಪರಿಮಿತ - ಅನಂತವಾದ ನಕ್ಷತ್ರ ಪುಂಜಗಳು, ನಕ್ಷತ್ರಗಳು, ಸೌರವ್ಯೂಹಗಳು, ಆಕಾಶಕಾಯಗಳು, ಗ್ರಹಗಳು, ಉಪಗ್ರಹಗಳು ರೂಪು ತಾಳುತ್ತಾ ಬಂದು ಕೊನೆಗೆ ೪೫೦ ಕೋಟಿ ವರುಷಗಳ ಹಿಂದೆ ನಮ್ಮ ಭೂಮಿಯು (ಪೃಥ್ವಿ ಗ್ರಹ) ರಚನೆಗೊಂಡಿತು. ಈ ಭೂಮಿಯು-ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಪಂಚಮಹಾಭೂತಂಗಳಿಂದ ಕೂಡಿ, ಅನಂತರ ಜೀವರಾಶಿಗಳ ಉಗಮಕ್ಕೆ ಕಾರಣವಾಯಿತು. ಸಸ್ಯ ಜಗತ್ತು ಮತ್ತು ಪ್ರಾಣಿ ಜಗತ್ತು ಎಂದು ವಿಭಜಿತವಾಯಿತು. ಸಸ್ಯ ಜಗತ್ತು ವೈವಿಧ್ಯಮಯ ಗಿಡ-ಮರ-ಬಳ್ಳಿಗಳಿಂದ ಕೂಡಿದ್ದರೆ, ಪ್ರಾಣಿ ಜಗತ್ತು ಅಮೀಬಾದಿಂದ ಹಿಡಿದು ಮಾನವನವರೆಗೆ ೮೪ ಲಕ್ಷ ಜೀವರಾಶಿಗಳ ಉಗಮಕ್ಕೆ ಕಾರಣವಾಗಿದೆ.

ಸಕಲ ಪ್ರಾಣಿಗಳಲ್ಲಿ ಮಾನವನಲ್ಲಿ ಮಾತ್ರ ವಿಚಾರ ಶಕ್ತಿ, ಯೋಚಿಸುವ ಶಕ್ತಿ ಪೂರ್ಣವಾಗಿ ವಿಕಾಸಗೊಂಡಾಗ - ನಿಸರ್ಗದ ಬಗ್ಗೆ, ತನ್ನ ಬಗ್ಗೆ, ಸಮಾಜ, ರಾಷ್ಟ್ರ, ಜಗತ್ತಿನ ಬಗ್ಗೆ ವಿಚಾರ ಮಾಡತೊಡಗಿದನು. ಈ ವಿಚಾರಶಕ್ತಿಯ ಚಿಂತನದ ಪರಿಣಾಮವಾಗಿ ತತ್ತ್ವಜ್ಞಾನ ಉಗಮವಾಯಿತು.

ಭಾರತೀಯ ದಾರ್ಶನಿಕರು ತತ್+ತವ+ಜ್ಞಾನ-ಅದು ನಿನ್ನ ಜ್ಞಾನ, ಅಂದರೆ

ಅದು-ಪರವಸ್ತು, ಪರಮಚೈತನ್ಯದ ಸ್ವರೂಪ ಜ್ಞಾನ ಕುರಿತು ಚಿಂತನ ನಡೆಸಿದಾಗ ಮೂಡಿ ಬಂದುದೇ ತತ್ತ್ವಜ್ಞಾನವಾಗಿದೆ.

ಪಾಶ್ಚಿಮಾತ್ಯ ಚಿಂತಕರಲ್ಲಿ – ತತ್ತ್ವಜ್ಞಾನವನ್ನು 'Philosophy' ಎಂದು ಕರೆಯಲಾಗಿದೆ. ಇದು ಗ್ರೀಕ್ ಭಾಷೆಯ ಎರಡು ಶಬ್ದಗಳಿಂದ ನಿಷ್ಪನ್ನವಾಗಿದೆ.

The Word 'Philosophy' is derived from the Greek words 'Philos' means loving ಅಂದರೆ ಪ್ರೇಮ 'Sophia' means wisdom, knowledge ಅಂದರೆ ಜ್ಞಾನ. Philosophy means - the love of knowledge and wisdom ತತ್ತ್ವಜ್ಞಾನವೆಂದರೆ – ಜ್ಞಾನದ ಪ್ರೇಮ.

ಆದ್ದರಿಂದ ಪ್ರತಿಯೊಂದು ಜ್ಞಾನ–ವಿಜ್ಞಾನ–ಕಲೆ ಶಾಸ್ತ್ರಗಳಿಗೆ ಬುನಾದಿ, ಮಾತೃ ಸ್ವರೂಪಿ ಎಂದರೆ ತತ್ತ್ವಜ್ಞಾನವೇ ಆಗಿದೆ.

ಅಂತೆಯೇ Philosophy is the mother of all sciences ಎಲ್ಲ ವಿಜ್ಞಾನಗಳ ತಾಯಿ ತತ್ವಜ್ಞಾನ ಎಂದು ಅಭಿಮಾನ–ಗೌರವದಿಂದ ಕರೆಯಲಾಗಿದೆ.

**೨) ವಚನ ಸಾಹಿತ್ಯದ ಉಗಮ :**

ಇಂತಹ ತತ್ತ್ವಚಿಂತನೆಯ ವಿಚಾರಗಳ ತಳಹದಿಯ ಮೇಲೆ 'ವಚನ' ವೆಂಬ ೧೨ನೆಯ ಶತಮಾನದ ಬಸವಾದಿ ಶರಣರ ವಚನ ಸಾಹಿತ್ಯದಲ್ಲಿಯ ತಾತ್ವಿಕ ಸೈದ್ಧಾಂತಿಕ, ದಾರ್ಶನಿಕ ಮೌಲ್ಯಗಳನ್ನು ವಿವೇಚನೆ ಮಾಡಬೇಕಾಗಿದೆ.

ವಚನ ಸಂಶೋಧನ ಪಿತಾಮಹ **ಡಾ. ಫ. ಗು. ಹಳಕಟ್ಟಿಯವರು** ತಮ್ಮ 'ವಚನ ಶಾಸ್ತ್ರಸಾರ – ಭಾಗ – ೧ರ ಪ್ರಸ್ತಾವನೆ ಪುಟ – ೨ರಲ್ಲಿ – "ವಚನ ಗ್ರಂಥಗಳು ಕನ್ನಡ ಭಾಷೆಯಲ್ಲಿನ ಬಹು ಮಹತ್ವದ ಗ್ರಂಥಗಳಾಗಿವೆ. ಒಂದು ಬಗೆಯ ವಾಙ್ಮಯವನ್ನೇ ಹುಟ್ಟಿಸಿರುತ್ತವೆಯೆಂದು ನಾವು ಹೇಳಬಹುದು. ಈ ವಾಙ್ಮಯವು ಮೊದಲಿಗೆ **ಬಸವೇಶ್ವರ ಕಾಲದಲ್ಲಿ ಉಗಮ**ವಾಯಿತೆಂದು ತೋರುತ್ತದೆ. ಈ ವಚನಕಾರರು ಕನ್ನಡ ವಾಙ್ಮಯವನ್ನು ಬೆಳೆಸಿರುವರಷ್ಟೇ ಅಲ್ಲಾ, ಅವರು ಕಾಲ ಕಾಲಕ್ಕೆ ಉತ್ಪನ್ನರಾಗಿ ಕರ್ನಾಟಕದ ಧಾರ್ಮಿಕ ಮತ್ತು ನೈತಿಕ ಉನ್ನತಿಗೋಸ್ಕರ ಬಹಳ ಪ್ರಯತ್ನಿಸಿದ್ದಾರೆ".

**ಡಾ. ಎಂ. ಆರ್. ಶ್ರೀನಿವಾಮೂರ್ತಿಯವರು** ವಚನ ಸಾಹಿತ್ಯದ ಮಹತ್ವವನ್ನು ತಿಳಿಸುತ್ತಾ – 'ವಚನ ಸಾಹಿತ್ಯ ಎರವಲು ತಂದದ್ದಲ್ಲ. ಅದು ಕರ್ನಾಟಕದ, ಕನ್ನಡದ ಸ್ವಾರ್ಜಿತ ಸ್ವತ್ತು. ವಚನಕಾರರು ಸಂಸ್ಕೃತದ ಆಚಾರ್ಯರಲ್ಲ. ಅವರು ಅಚ್ಚಗನ್ನಡದ ಬೇಸಾಯಗಾರರು' ಎಂದು .ವಚನ ಧರ್ಮಸಾರ' ಎಂಬ ಕೃತಿಯ ಪುಟ – ೧೦ರಲ್ಲಿ ಹೇಳಿದ್ದಾರೆ.

**ಡಾ. ಎಂ. ಚಿದಾನಂದ ಮೂರ್ತಿ**ಯವರು ತಮ್ಮ 'ವಚನ ಸಾಹಿತ್ಯ' ಎಂಬ ಕೃತಿಯ ಪುಟ – ೧ ರಲ್ಲಿ – 'ವಚನ ಎನ್ನುವುದು ಕನ್ನಡದಲ್ಲಿ ವಿಶಿಷ್ಟ ಸಾಹಿತ್ಯ ಪ್ರಕಾರವೊಂದಕ್ಕೆ ಹೆಸರು. ಅನ್ಯ ಭಾಷೆಗಳ ಯಾವುದೇ ಮಾದರಿಯನ್ನು ಯಾವುದೇ ದೃಷ್ಟಿಯಿಂದಲೂ ಅನುಕರಿಸದೇ ಅಥವಾ ಆದರ್ಶವಾಗಿಟ್ಟುಕೊಳ್ಳದೆ, ಕೇವಲ ಅನುಭವದಿಂದಲೇ ಮೂಡಿ ರೂಪಿತವಾದ ಈ ಪ್ರಕಾರವು ಕನ್ನಡದ ಹೆಮ್ಮೆಯಾಗಿದೆ. ವಿಶ್ವಸಾಹಿತ್ಯಕ್ಕೆ ಕನ್ನಡವು ಸಲ್ಲಿಸಿರುವ ಕಾಣಿಕೆಯಾಗಿದೆ' ಎಂದು ಬರೆದಿದ್ದಾರೆ.

**'ವಚನ'** – ಎಂಬ ಮೂರಕ್ಷರಗಳ ಶಬ್ದ ಕಿರಿದಾದರೂ ಹಿರಿದಾದ ಅರ್ಥವನ್ನು ಒಳಗೊಂಡಿದೆ. ಅರಿವು–ಆಚಾರ–ಅನುಭಾವವನ್ನು ಅಂಗವಿಸಿಕೊಂಡ ಕಾಯಕ ಜೀವಿಗಳು ಲೋಕಗುರು ಜಗಜ್ಯೋತಿ ಬಸವೇಶ್ವರರು ಸ್ಥಾಪಿಸಿದ ಕಲ್ಯಾಣದ ಅನುಭವ ಮಂಟಪದಲ್ಲಿ (ಪ್ರಪಂಚದ ಮೊಟ್ಟ ಮೊದಲನೆಯ ಸಮಾಜೋ–ಧಾರ್ಮಿಕ ಪ್ರಜಾಪ್ರಭುತ್ವ ಮಾದರಿಯ ಪಾರ್ಲಿಮೆಂಟ್‌ದಲ್ಲಿ) ತಮ್ಮ ಅನುಭವಗಳನ್ನು ವ್ಯಷ್ಟಿ–ಸಮಷ್ಟಿಯ ಸಮಸ್ಯೆಗಳ ಕುರಿತು ಚರ್ಚಿಸಿ, ಚಿಂತನ–ಮಂಥನಗೈದು ಹೊರಹೊಮ್ಮಿ ಬಂದ ಸ್ವಾನುಭಾವದ ನುಡಿಗಳಿಗೆ ರೂಪು ಕೊಟ್ಟುದೇ 'ವಚನ' ಗಳಾದವು.

ಅನುಭವ ಮಂಟಪದ ೭೭೦ ಜನ ಬಸವಾದಿ ಶರಣ – ಶರಣೆಯರ ಸ್ವಾನುಭಾವದ ಮಾತುಗಳು 'ವಚನ' ವೆಂಬ ಪದ್ಯ – ಗದ್ಯ ಮಿಶ್ರಿತ ರೂಪತಾಳಿ ಬಂದು ವಚನ ಸಾಹಿತ್ಯವಾಗಿ ರಚನೆಗೆ ಬಂದಿದೆ.

'ವಚನ' ಎಂಬುದು ಸಾಹಿತ್ಯವೇ ? ವಾಙ್ಮಯವೆ ? ಮಾರ್ಗವೆ ? ಪಂಥವೆ? ಧರ್ಮವೆ? ತತ್ತ್ವವೆ? ಶಾಸ್ತ್ರವೆ ? ಸಿದ್ಧಾಂತವೇ ? ದರ್ಶನವೆ ? ಎಂಬ ವಿಚಾರವಾಗಿ ಅನೇಕ ವಿದ್ವಾಂಸರು ಚರ್ಚಿಸುತ್ತಾ ಬಂದಿದ್ದಾರೆ. 'ವಚನ' ಎಂಬುದು ವಿವಿಧ ಆಯಾಮಗಳ ಮೂಲಕ ಚಿಂತನ ಮಾಡಲಾಗಿ – ಈ ಎಲ್ಲವೂ ಹೌದು, ಮಿಗಿಲಾಗಿ ಮಾನವ ಕುಲದ ಕಲ್ಯಾಣ ಬಯಸಿದ, ಸಕಲ ಜೀವರಾಶಿಗಳ ಲೇಸನು ಬಯಸಿದ, ಸಮತೆ – ಸ್ವಾತಂತ್ರ್ಯ – ಬಂಧುತ್ವ – ಮಾನವೀಯತೆಯ ವಿಶ್ವದರ್ಶನವಾಗಿದೆ.

ಮರೆವಿನ ಮಾನವ ಅರಿವಿನ ಶರಣನಾಗಿ ತನು – ಮನ – ಭಾವಗಳನ್ನು ಶುದ್ಧ – ಸಿದ್ಧ – ಪ್ರಸಿದ್ಧವಾಗಿಸಿಕೊಂಡು, ಅನುಭವಗಳ ಚಿಂತನ – ಮಂಥನ ನಡೆಸಿ ಅಂತರಂಗದ ಚಿದ್ಬೆಳಗಿನ ಪರಮಾನಂದದೋಳ್ ಓಲಾಡಿ ಹೊರಹೊಮ್ಮಿದ ನಿಃಶಬ್ದದ ಶಬ್ದಗಳೇ ಶರಣರ ಸೂಳ್ನುಡಿಗಳೆನಿಸಿವೆ.

**೧) ಬಸವಣ್ಣನವರ ಸ್ವಾನುಭಾವದಲ್ಲಿ –**

ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.

ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು.
ನುಡಿಯೊಳಗಾಗಿ ನಡೆಯದಿದ್ದಡೆ
ಕೂಡಲಸಂಗಮದೇವನೆಂತೊಲಿವನಯ್ಯಾ ?

**೨) ಅಲ್ಲಮ ಪ್ರಭುದೇವರ ಸ್ವಾನುಭಾವದಲ್ಲಿ –**

ಮಾತೆಂಬುದು ಜ್ಯೋತಿರ್ಲಿಂಗ
ಸ್ವರವೆಂಬುದು ಪರತತ್ತ್ವ
ತಾಳೋಷ್ಠ ಸಂಪುಟವೆಂಬುದು
ನಾದ ಬಿಂದು ಕಳಾತೀತ
ಗುಹೇಶ್ವರನ ಶರಣರು
ನುಡಿದು ಸೂತಕಿಗಳಲ್ಲ
ಕೇಳಾ ಮರುಳೆ.

**೩) ಜೇಡರ ದಾಸಿಮಯ್ಯನವರ ಸ್ವಾನುಭಾವದಲ್ಲಿ –**

ಕರಿಯನಿತ್ತಡೆ ಒಲ್ಲೆ
ಸಿರಿಯನಿತ್ತಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತರೂ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯ
ಒಂದರಘಳಿಗೆಯಿತ್ತಡೆ
ನಿಮ್ಮನಿತ್ತೆ ಕಾಣಾ, ರಾಮನಾಥ

ಸದ್ವಸ್ತುವಿನ ಅರಿವು – ಆಚಾರ – ಅನುಭಾವವನು ಅಂಗವಿಸಿಕೊಂಡ ಶರಣರ ನುಡಿ ಸೂಳ್ನುಡಿ, ಲಿಂಗ ಮೆಚ್ಚಿ ಅಹುದಹುದೆನ್ನುವ ನುಡಿ, ಅವರ ಮಾತು ಜ್ಯೋತಿರ್ಲಿಂಗ ! ಇಂತಹ 'ವಚನ' ವೆಂಬ ಮೂರಕ್ಷರದ ಶಬ್ದ ಅತ್ಯುದ್ಭುತ, ಅಪ್ರತಿಮ, ಅತಿ ಸುಂದರ, ಅತ್ಯಂಥ ಅರ್ಥಪೂರ್ಣ !

**ವ** – ಎಂದರೆ ವಚಿಸು – ಅರಿವು – ತತ್ತ್ವ (ಅಷ್ಟಾವರಣ)
**ಚ** – ಎಂದರೆ ಚರಿಸು – ಆಚಾರ – ಸಿದ್ಧಾಂತ (ಪಂಚಾಚಾರ)
**ನ** – ಎಂದರೆ ನಯನಿಸು – ಅನುಭಾವ – ದರ್ಶನ (ಷಟ್‌ಸ್ಥಲ)

ಇದನ್ನೇ ತತ್ತ್ವವೇತ್ತ ಅನುಭಾವಿಗಳು–

Vachana is the union of philosophy - metaphysics - mysticism ಎಂದೂ, ಜ್ಞಾನ – ವಿಜ್ಞಾನ – ಸುಜ್ಞಾನಗಳ ತ್ರಿವೇಣಿ ಸಂಗಮವೇ

ವಚನವೆಂದೂ ಕರೆದಿರುವರು. ಅಷ್ಟಾವರಣ ತತ್ತ್ವಗಳ ಅರಿವು – ಪಂಚಾಚಾರ ಸಿದ್ಧಾಂತದ ಆಚರಣೆ – ಷಟ್‌ಸ್ಥಲ ವಿಕಾಸದ ದರ್ಶನ ಇವುಗಳ 'ಕೂಡಲಸಂಗಮ' ವೇ ವಚನ 'ತತ್ತ್ವಜ್ಞಾನ – ಸಿದ್ಧಾಂತ – ದರ್ಶನ' ವಾಗಿದೆ.

**೩) ವಚನಸಾಹಿತ್ಯದಲ್ಲಿ ವಿಶ್ವ ಸೃಷ್ಟಿಯ ಉಗಮ :**

ಬಸವಾದಿ ಶರಣರು ಜ್ಞಾನ – ವಿಜ್ಞಾನ – ಸುಜ್ಞಾನಗಳನ್ನು ಅಂತಃಪ್ರಜ್ಞೆಯಿಂದ ಅರಿತು ಸ್ವಾನುಭಾವದ ನೆಲೆಯಲ್ಲಿ ಪರಾತ್ಪರ ಪರವಸ್ತುವಿನ ಅಸ್ತಿತ್ವವನ್ನು ಅರಿತವರು. ಈ ಪರವಸ್ತುವನ್ನು ಪರಶಿವ, ಪರಬ್ರಹ್ಮನ್, ಮಹಾಬಯಲು, ಸರ್ವಶೂನ್ಯ ನಿರಾಲಂಬ, ಸಹಜ ಸ್ಥಿತಿ ಎಂದು ವಚನಗಳಲ್ಲಿ ಕರೆಯಲಾಗಿದೆ. ಅದಕ್ಕೆ ಹೆಸರು ಇಲ್ಲ. ಅಲ್ಲಮಪ್ರಭು ಹೇಳುತ್ತಾರೆ – 'ಗುಹೇಶ್ವರನೆಂಬುದೇನೋ ಅದೊಂದು ಅನಂತತೆಯ ಹೆಸರು' ಆ ಹೆಸರಿಲ್ಲದ ಮಹಾಘನ ವಸ್ತುವನ್ನು ಬಸವಾದಿ ಶರಣರು ತಮ್ಮ ತಮ್ಮ ಸ್ವಾನುಭಾವದ ವಚನಗಳಿಗೆ 'ವಚನಾಂಕಿತ' ವಾಗಿ ಒಂದೊಂದು ಹೆಸರು ಬಳಸಿದ್ದಾರೆ. ಬಸಣ್ಣನವರು 'ಕೂಡಲಸಂಗಮದೇವ' ಎಂದೂ, ಅಲ್ಲಮಪ್ರಭು 'ಗುಹೇಶ್ವರ' ಎಂದೂ ಮಹಾದೇವಿಯಕ್ಕ 'ಚೆನ್ನಮಲ್ಲಿಕಾರ್ಜುನ' ಎಂದೂ.......ಹೀಗೆಯೇ ವಚನಕಾರರು ಅಂಕಿತವನ್ನು ಬಳಸಿ ವಚನ ರಚನೆ ಮಾಡಿದ್ದಾರೆ. ಇದು ಆಯಾ ಶರಣರ ವಚನಗಳನ್ನು ಗುರುತಿಸುವ ರೀತಿಯಾಗಿದೆ. 'ವಚನಾಂಕಿತ' ಗಳಿಂದಲೇ ಈ ವಚನ ಇಂತಹ ಶರಣ/ಶರಣೆಯದು ಎಂದು ಖಚಿತವಾಗಿ ಗುರುತಿಸಬಹುದಾಗಿದೆ.

ಈ ಸಚರಾಚರ ವಿಶ್ವವು ರಚನೆಗೆ ಬಾರದ ಪೂರ್ವದಲ್ಲಿ ಅದು ನಿರಾಕಾರವಾದ ಮಹಾಬಯಲಾಗಿತ್ತು. ಸರ್ವಶೂನ್ಯ ನಿರಾಲಂಬ ಸಹಜ ಸ್ಥಿತಿಯಲ್ಲಿತ್ತು.

**ಅಲ್ಲಮಪ್ರಭುದೇವರು ಇದನ್ನೇ ತಮ್ಮ ವಚನದಲ್ಲಿ –**

ಆದಿ ಆಧಾರವಿಲ್ಲದಂದು
ಹಮ್ಮು ಬಿಮ್ಮುಗಳಿಲ್ಲದಂದು
ಸುರಾಳ ನಿರಾಳವಿಲ್ಲದಂದು
ಸಚರಾಚರವೆಲ್ಲ ರಚನೆಗೆ ಬಾರದಂದು
ಗುಹೇಶ್ವರಾ, ನಿಮ್ಮ ಶರಣನುದಯಿಸಿದನಂದು !

ಈ ಮಹಾಬಯಲಿನಲ್ಲಿ ಒಂದು ಪರಮಚೈತನ್ಯ – ಪರಮಾಣು – ದೇವಕಣ ಉದಯಿಸಿತು. ಇದನ್ನು ಆಧುನಿಕ ಭೌತವಿಜ್ಞಾನಿ ಡಾ – ವಿಕ್ಟರ್ – Vaccum is a dynamic substance ಎನ್ನುತ್ತಾನೆ. ಶೂನ್ಯವು ಕ್ರಿಯಾತ್ಮಕವಾದುದ್ದು, ಅದು ವಿಶ್ವದ ಎಲ್ಲ ವಸ್ತುಗಳ, ಎಲ್ಲ ಘಟನೆಗಳ ಸಾರ, ಅನಂತ ಶಕ್ತಿಯ ಆಗರ. ಅದು ಸ್ವಯಂ

ಪ್ರೇರಿತವಾಗಿ ಉದ್ರೇಕಗೊಂಡಾಗ ಆ ಶಕ್ತಿಯ ಸ್ವಲ್ಪ ಅಂಶವು ಹೊರಹೊಮ್ಮಿ, ಆ ಶಕ್ತಿಯಿಂದ ವಿಶ್ವರಚನೆಗೆ ಬೇಕಾದ ಮೂಲ ಕಣಗಳು ಸೃಷ್ಟಿಯಾಗುತ್ತವೆ.

ಶೂನ್ಯವು ಎಲ್ಲವನ್ನೂ ಗರ್ಭೀಕರಿಸಿಕೊಂಡಿರುವ ಜೀವಂತ ಮಹಾಬಯ–ಲಾಗಿದೆ. ಸಾವಿರಾರು ವರುಷಗಳ ಹಿಂದೆ 'ಮಹಾಸ್ಫೋಟ' ಘಟಿಸಿ ಕತ್ತಲೆಯ ಗರ್ಭದಿಂದಲೇ ಅಪಾರ ಶಕ್ತಿಯು ಬೆಳಕಿನ ರೂಪದಲ್ಲಿ ಹೊರಹೊಮ್ಮಿತು.

ಅಪರಿಮಿತದ ಕತ್ತಲೆಯೊಳಗೆ
ವಿಪರೀತದ ಬೆಳಗನಿಕ್ಕಿದವರಾರೋ ?
ಬೆಳಕೂ ಅದೆ ಕತ್ತಲೆಯೂ ಅದೆ !
ಇದೇನು ಚೋದ್ಯವೋ ?
ಒಂದಕ್ಕೊಂದು ಅಂಜದು !
ಆನೆಯೂ ಸಿಂಹವೂ ಒಂದಾಗಿ ಉಂಬುದ
ಕಂಡು, ಬೆರಗಾದೆನು ಗುಹೇಶ್ವರಾ !

Darkness is the thickest form of light. Heat and tremondus energy evolved in the form of light, ಎಂಬ ವಿಜ್ಞಾನಿಯ ಅಭಿಪ್ರಾಯ ನಿದರ್ಶನವಾಗಿದೆ.

ಬಯಲಿನೊಳಗಣ ಬಯಲು ಮಹಾಬಯಲು, ಅದು ಇದ್ದೂ ಇಲ್ಲದಂತಿರುವ ಪರಮಚೈತನ್ಯ ! ಅದೊಂದು ಮಹಾಘನವು !!

ಶರಣ, ವಚನಕಾರ ಚಂದಿಮರಸರು ಹೇಳುವಂತೆ –

ಏನೆಂದೆನಲಿಲ್ಲದ ಮಹಾಘನವು
ತನ್ನ ಲೀಲೆಯಿಂದ ತಾನೇ
ಸ್ವಯಂಭುಲಿಂಗವಾಯಿತ್ತು !
ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ
ಆ ಶಿವಶಕ್ತ್ಯಾತ್ಮಕದಿಂದಾದುದು ಆತ್ಮ
ಆತ್ಮನಿಂದಾದುದು ಆಕಾಶ
ಆಕಾಶದಿಂದಾದುದು ವಾಯು
ಆಗ್ನಿಯಿಂದಾದುದು ಅಪ್ಪು
ಅಪ್ಪುವಿನಿಂದಾದುದು ಪೃಥ್ವಿ
ಪೃಥ್ವಿಯಿಂದಾದುದು ಸಕಲಜೀವವೆಲ್ಲಾ
ಇವೆಲ್ಲ ನಿಮ್ಮ ನೆನಹು ಮಾತ್ರದಿಂದಲಾದವು
ಸಿಮ್ಮಲಿಗೆಯ ಚೆನ್ನರಾಮ.

ಏನೆಂದೆನಲಿಲ್ಲದ ಆ ಮಹಾಘನವಸ್ತುವೇ ಪರಶಿವ, ಪರಬ್ರಹ್ಮನ್, ಪರಮಾತ್ಮ, ದೇವಕಣ ಎಂದು ಕರೆಯಲಾಗಿದೆ.

ಶರಣ ಸಿದ್ಧರಾಮೇಶ್ವರರು ತಮ್ಮ ವಚನವೊಂದರಲ್ಲಿ ಹೇಳುತ್ತಾರೆ –

ಲೀಲೆಯದು ಪರಬೊಮ್ಮದ ಇಚ್ಛೆ
ಇಚ್ಛೆಯದು ಸಕಲಜೀವಜಾಲೋತ್ಪತ್ತಿ
ಸಕಲಜೀವ ಜಾಲೋತ್ಪತ್ತಿಯದು ಜಗದ್ರಚನೆ
ಜಗದ್ರಚನೆಯದು ಜಗತ್‌ಪ್ರಳಯ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನಾ.

ಆ ಪರಾತ್‌ಪರ ಪರಶಿವ, ಪರಬ್ರಹ್ಮನ್‌ದ ನೆನಹು ಮಾತ್ರದಿಂದ ಲೀಲೆ (ಸ್ಪಂದನ) ಪ್ರಾರಂಭವಾದಾಗ, 'ಚಿನ್ನಾದ' ಹೊರಹೊಮ್ಮಿತು. ಇದನ್ನು 'ಅನಾಹತನಾದ' ವೆಂತಲೂ ಕರೆಯಲಾಗಿದೆ.

| | | | | |
|---|---|---|---|---|
| ಚಿನ್ನಾದ | – | ನಾದ | – | ಅ–ಕಾರ |
| ಚಿದ್ಬಿಂದು | – | ಬಿಂದು | – | ಉ–ಕಾರ |
| ಚಿತ್ಕಲೆ | – | ಕಲೆ | – | ಮ–ಕಾರ |

ಮೂಲ ಪ್ರಣವಾಕ್ಷರಗಳಾದ ಅ–ಉ–ಮ ಸಂಯೋಗದಿಂದ 'ಓಂಕಾರ' 'ಆಹತ್‌ನಾದ'ವು ಉಂಟಾಯಿತು. ಇದನ್ನು 'ಮಹಾಲಿಂಗ' ತತ್ತ್ವ ಎನ್ನಲಾಗಿದೆ.

**೪) ತತ್ತ್ವಮೀಮಾಂಸೆಯ ದೃಷ್ಟಿಯಿಂದ :**

೧) ದೇವ (God) ೨) ಜೀವಾತ್ಮ (Soul) ೩) ಜಗತ್ತು (World) ೪) ಸಂಬಂಧ (Relationship) ಕುರಿತು ಬಸವಾದಿ ಶರಣರು ತಮ್ಮ ವಚನಗಳಲ್ಲಿ ವಿವೇಚನೆ ಗೈದಿರುವುದನ್ನು ಕಾಣುತ್ತೇವೆ.

**೧) ದೇವ (God) :**

ಬಸವಾದಿ ಶರಣರು ದೇವ, ಮಹಾದೇವ ಎಂಬುದಾಗಿ ಕರೆದಿರುವರು ದಿವ–ಎಂಬ ಧಾತುವಿನಿಂದ **ದೇವ** ಎಂಬುದು ನಿಷ್ಪನ್ನವಾಗಿದೆ. ದಿವ–ಎಂದರೆ ಬೆಳಕು. ದೇವ–ಎಂದರೆ ಬೆಳಕಿನ ತತ್ತ್ವ, ಬ್ರಹ್ಮಾಂಡಗತವಾಗಿರುವ 'ಮಹಾಲಿಂಗ'ದ ಬೆಳಕು. ಅದು ವಿಶ್ವದ ಒಳ–ಹೊರಗೆಲ್ಲ ವ್ಯಾಪಿಸಿರುವ ಪರಮಚೈತನ್ಯವಾಗಿದೆ. ಧರ್ಮಪಿತರಾದ ಗುರುಬಸವಣ್ಣನವರು ತಮ್ಮ ವಚನದಲ್ಲಿ –

ಎತ್ತ ನೋಡಿದಡತ್ತ ನೀನೇ ದೇವಾ
ಸಕಲವಿಸ್ತಾರದ ರೂಹು ನೀನೇ ದೇವಾ
ವಿಶ್ವತೋ ಚಕ್ಷು ನೀನೇ ದೇವಾ

ವಿಶ್ವತೋ ಬಾಹು ನೀನೇ ದೇವಾ
ವಿಶ್ವತೋ ಪಾದ ನೀನೇ ದೇವಾ
ಕೂಡಲಸಂಗಮದೇವಾ.

ಎಂದು ಮಹಾಬೆಳಕಿನ ಸ್ವರೂಪವಾಗಿರುವ 'ದೇವ' ತತ್ತ್ವದ ದರ್ಶನ ಮಾಡಿಸಿದ್ದಾರೆ. ವಿಶ್ವ ಬ್ರಹ್ಮಾಂಡಗತವಾಗಿರುವ 'ಮಹಾಲಿಂಗ' (Macrocosm) ತತ್ತ್ವವೇ ಮಾನವ ದೇಹ (ಪಿಂಡಾಂಡ)ದಲ್ಲಿ 'ಚಿಲ್ಲಿಂಗ' (Microcosm) ತತ್ತ್ವರೂಪದಲ್ಲಿದೆ.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ
ಬ್ರಹ್ಮಾಂಡದಿಂದತತ್ತ ನಿಮ್ಮ ಶ್ರೀಮುಕುಟ
ಅಗಮ್ಯ ಅಗೋಚರ ಅಪ್ರತಿಮ ಅಪ್ರಮಾಣ
ಲಿಂಗವೆ ಕೂಡಲಸಂಗಮದೇವಯ್ಯಾ
ಎನ್ನ ಕರಸ್ಥಲಕೆ ಬಂದು ಚುಳುಕಾದಿರಯ್ಯಾ.

ವಿಶ್ವದಾಕಾರದ ಮಹಾಲಿಂಗ ತತ್ತ್ವದ ಗರ್ಭದಲ್ಲಿ ಚಿಲ್ಲಿಂಗ ತತ್ತ್ವವನು ಇಂಬಿಟ್ಟು ನಿರಾಕಾರ ಚೈತನ್ಯವ ಸಾಕಾರಕೆ ಚುಳುಕಾಗಿಸಿ **'ಇಷ್ಟಲಿಂಗ'** ಸ್ವರೂಪದಲಿ ಕರಸ್ಥಲಕೆ ತಂದುಕೊಂಡ ಸ್ವಯಂಕೃತ ಗುರು ಬಸವಣ್ಣನವರು. ಅಂತೆಯೇ ಅಲ್ಲಮ ಪ್ರಭುದೇವರು– ಆದಿಯಲ್ಲಿ ನೀನೇ ಗುರುವಾದ ಕಾರಣ ನಿನ್ನಿಂದ ಹುಟ್ಟಿತ್ತು ಲಿಂಗ....ನೀನೇ ಪೂರ್ವಾಚಾರಿ' ಎಂದು ಸ್ತುತಿಸಿರುವುದನ್ನು ಕಾಣುತ್ತೇವೆ. ಗುರು ಬಸವಣ್ಣನವರು ತಮಗೆ ಬಾಲ್ಯದಿಂದಲೂ ಕಾಡುತ್ತಿದ್ದ ವರ್ಣ–ಆಶ್ರಮ–ಲಿಂಗ–ವರ್ಗ–ಜಾತಿ ಭೇದಗಳೆಂಬ 'ಪಂಚಭೇದ' ಗಳ ನಿರ್ಮೂಲನೆಗಾಗಿ ಕಂಡುಹಿಡಿದ, ಸಂಶೋಧಿಸಿದ ಅದ್ಭುತ ಪರಿಹಾರವೇ 'ಇಷ್ಟಲಿಂಗ' ವೆಂಬ ಅರುಹಿನ ಕುರುಹು, ಆಚಾರದ ಪ್ರತೀಕ, ಅನುಭಾವದ ನೆಲೆ' ಯಾಗಿರುವ ಅನುಪಮವಾಗಿರುವ ತತ್ತ್ವ ವಿಶೇಷವಾಗಿದೆ.

ಈ 'ಇಷ್ಟಲಿಂಗ' ಅಂಗಕ್ಕೆ ಆಯತ ಮಾಡಿಕೊಂಡವರೆಲ್ಲ ಸಾಕ್ಷಾತ್ ಕೂಡಲಸಂಗಮದೇವರೆಂಬೆ ಎನ್ನುತ್ತಾರೆ. ಆದ್ದರಿಂದ ಲಿಂಗಾಯತರು ಪಂಚಭೇದಗಳನು ನಿರಸನ ಮಾಡಿಕೊಂಡ ಅತಿವರ್ಣಾಶ್ರಮಿಗಳು, ಜಾತಿರಹಿತರು ಎಂಬುದನ್ನು ಬಸವಾದಿ ಶರಣರು ಆಚರಿಸಿ ತೋರಿದರು.

ಬಸವಣ್ಣನವರು ಅರಿತು–ಆಚರಿಸಿ–ಅನುಭಾವಕ್ಕೆ ತಂದುಕೊಂಡ 'ದೇವ' ಸ್ವರೂಪದ ದರ್ಶನ ಅವರ ವಚನದಲ್ಲಿದೆ –

ಪ್ರಣವಾರೂಢನು, ಪ್ರಣವ ಸ್ವರೂಪನು
ಪ್ರಣವ ಪ್ರಕೃತಿ ಸಂಜ್ಞನು

ಪ್ರಣವ ಷಡಂಗ ಸಮರಸ
ನಮ್ಮ ಕೂಡಲಸಂಗಮದೇವರು

ಬಸವಣ್ಣನವರ ಕೂಡಲಸಂಗಮದೇವರು ಓಂಕಾರ ಪ್ರಣವವು ಹೊರಹೊಮ್ಮುವ ಪೂರ್ವದಲ್ಲಿ ಸಹಜ–ಸರ್ವಶೂನ್ಯ ನಿರಾಲಂಬ ನಿಷ್ಕಲಲಿಂಗ ಸ್ವರೂಪದಲ್ಲಿದ್ದು ಅನಂತರ ಚಿನ್ನಾದ–ಚಿದ್ಬಿಂದು–ಚಿತ್ಕಲೆಯಾಗಿ ಹೊರಹೊಮ್ಮಿ ಓಂಕಾರ ಪ್ರಣವ ಸ್ವರೂಪಕೆ ಬಂದು, ಅದು ಪರಶಿವ–ಪರಾಶಕ್ತಿಯ ಪ್ರಕೃತಿ ಸಂಜ್ಞನಾದವನು. ಆ ಪ್ರಣವವೇ ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ, ಅಖಂಡವೆಂಬ ಆರು ಚೈತನ್ಯಲಿಂಗ ರೂಪು ತಾಳಿ, ಭಕ್ತಾಂಗ, ಮಹೇಶಾಂಗ, ಪ್ರಸಾದಿಅಂಗ, ಪ್ರಾಣಲಿಂಗಾಂಗ, ಶರಣಾಂಗ, ಐಕ್ಯಾಂಗವೆಂಬ ಷಡಂಗದಲ್ಲಿ ಸಮರಸವಾಗಿಪ್ಪ 'ಲಿಂಗಾಂಗ ಸಾಮರಸ್ಯ' ಸ್ವರೂಪದಲ್ಲಿರುವ ಅಪ್ರತಿಮ, ಅಪ್ರಮಾಣದೇವ.

## ೨) ಜೀವತ್ಮ (Soul) :

ಪಂಚಮಹಾಭೂತಗಳ ಪಂಚೀಕರಣದ ಹಂಚಿಕೆಯಿಂದ ಉಂಟಾದ ಈ ಮಾನವ ದೇಹದಲ್ಲಿ ೨೫ ತತ್ತ್ವಗಳಿವೆ. ಆತ್ಮತತ್ತ್ವದಿಂದ ಜೀವಂತಿಕೆ ಪಡೆದುಕೊಂಡಿರುವ ಪರಿಶುದ್ಧವಾಗಿರುವ ಮಾನವ ಶರೀರವನ್ನು ಬಸವಾದಿ ಶರಣರು 'ಅಂಗ' ಎಂದು ಕರೆದಿರುವರು. ಅಂಗತತ್ತ್ವಗಳು – ಕೆಳಗಿನಂತಿವೆ.

(೧) ಭೂತಪಂಚಕ – ಪೃಥ್ವಿ ಅಪ್ಪು ತೇಜ ವಾಯು ಆಕಾಶ.

(೨) ಜ್ಞಾನೇಂದ್ರಿಯ ಪಂಚಕ – ಕಣ್ಣು ಕಿವಿ ಮೂಗು ನಾಲಿಗೆ ಚರ್ಮ

(೩) ಕರ್ಮೇಂದ್ರಿಯ ಪಂಚಕ – ವಾಕ್ ಪಾಣಿ ಪಾದ ಗುದ ಗುಹ್ಯ.

(೪) ವಾಯು ಪಂಚಕ – ಪ್ರಾಣ ವ್ಯಾನ ಉದಾನ ಅಪಾನ ಸಮಾನ.

ಅಥವಾ ವಿಷಯ ಪಂಚಕ – ಶಬ್ಧ ಸ್ಪರ್ಷ ರೂಪ ರಸ, ಗಂಧ.

(೫) ಅಂತಃಕರಣ ಚತುಷ್ಟಯ – ಮನ ಬುದ್ಧಿ ಅಹಂಕಾರ ಚಿತ್ತ

(೬) ಆತ್ಮ (ಜೀವಾತ್ಮ)

ಹೀಗೆ ಒಟ್ಟು ೨೫ ತತ್ತ್ವಂಗಳನ್ನು ಅಂಗತತ್ತ್ವಗಳೆಂದು ಹೇಳಲಾಗಿದೆ. ಬ್ರಹ್ಮಾಂಡ ದೊಳಗಣ ಮಹಾಲಿಂಗತತ್ತ್ವಂಗಳೇ ಪಿಂಡಾಂಡದೊಳಗೆ ಅಂಶಿಕರೂಪದಲ್ಲಿರುವುದರಿಂದ 'ಯಥಾ ಬ್ರಹ್ಮಾಂಡ ತಥಾ ಪಿಂಡಾಂಡ' ಎಂದು ದಾರ್ಶನಿಕರು, ಶರಣರು ಹೇಳುತ್ತಾರೆ.

ಈ ಮಾನವ ದೇಹವು ಸಾಕಾರವಾಗಿರುವುದರಿಂದ ಇದನ್ನು 'ಸ್ಥಾವರ' ವೆಂತಲೂ ದೇಹದೊಳಗಣ ಆತ್ಮವು ನಿರಾಕಾರ ಚೈತನ್ಯವಾಗಿರುವುದರಿಂದ 'ಜಂಗಮ' ವೆಂತಲೂ ಕರೆಯುತ್ತಾರೆ.

Body is material substance. It is inactive.
Soul is spiritual substance. It is active.

ದೇಹ – ಸ್ಥಾವರ, ದೇಹದೊಳಗಣ ಆತ್ಮ ಜಂಗಮವಾದುದರಿಂದ ಬಸವಣ್ಣನವರು 'ಸ್ಥಾವರ–ಜಂಗಮ ಒಂದೆಂದುದು ಕೂಡಲಸಂಗನ ವಚನ' ಎಂದು ಹೇಳಿದ್ದಾರೆ.

**ಶರಣ ಜೇಡರ ದಾಸಿಮಯ್ಯನವರು –**

ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ
ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ
ಶರೀರದೊಳಗೆ ಆತ್ಮನನಾರೂ ಕಾಣದಂತಿರಿಸಿದೆ
ನೀ ಬೆರಸುವ ಭೇದಕ್ಕೆ ಬೆರಗಾದೆನಯ್ಯಾ
ರಾಮನಾಥಾ.

ಮರ ಎಂದರೆ ಕಟ್ಟಿಗೆ, ಕಟ್ಟಿಗೆಯಲ್ಲಿ ಮಂದಾಗ್ನಿ (ಗುಪ್ತೋಷ್ಣ) ಉರಿಯದಂತೆ ಇದೆ. ನೊರೆವಾಲು ಎಂದರೆ ಬುರುಗುಸಹಿತವಾಗಿರುವ ಅದೇ ಆಗ ಆಕಳಿಂದ (ಹಸುವಿನಿಂದ) ಕರೆದ ಹಾಲಿನಲ್ಲಿ ತುಪ್ಪವಿದ್ದರೂ ಅದು ಕಂಪು (ವಾಸನೆ) ಇಲ್ಲದಂತಿದೆ. ಇದೇ ಪ್ರಕಾರವಾಗಿ ಕಣ್ಣಿಗೆ ಕಾಣುವ ದೇಹದೊಳಗೆ ಆತ್ಮತತ್ತ್ವವು ನಮಗೆ ಕಾಣದಂತಿರುವದು. ದೇವರು ಮಾನವ ಶರೀರದಲ್ಲಿ ಆತ್ಮನನ್ನು ಬೆರಸಿರುವ ರಹಸ್ಯ (ರೀತಿ) ಕಂಡು ಶರಣ ದಾಸಿಮಯ್ಯ ಆಶ್ಚರ್ಯವ್ಯಕ್ತಪಡಿಸುತ್ತಾರೆ.

ಇಂತಹ ಶರೀರವಿನಲ್ಲಿ – ಅಷ್ಟತನುಗಳಿವೆ ಈ ಎಂಟು ತನುವಿನಲ್ಲಿ ಎಂಟು ತತ್ತ್ವಗಳು ಇರುವುದರಿಂದ ಅವನ್ನು ಅಂತರಂಗದ ಅಷ್ಟಾವರಣಗಳೆಂದೂ, ಜ್ಞಾನಾಷ್ಟಾವರಣಗಳೆಂದೂ ಕರೆಯಲಾಗಿದೆ. ಅವೇ ನಿರಾಕಾರ ತತ್ತ್ವಗಳು ವ್ಯಕ್ತಗೊಂಡಾಗ ಕ್ರಿಯಾಷ್ಟಾವರಣ ಅರ್ಥಾತ್ ಬಹಿರಂಗದಷ್ಟಾವರಣಗಳೆಂದೂ ಕರೆಯಲಾಗಿದೆ.

| | ಶರೀರದ ಅಷ್ಟತನುಗಳು | ಅಂತರಂಗದ ಜ್ಞಾನಾಷ್ಟಾವರಣ | ಬಹಿರಂಗದ ಕ್ರಿಯಾಷ್ಟಾವರಣ |
|---|---|---|---|
| ೧) | ಸ್ಥೂಲ ತನು | ಚಿದ್‌ಗುರು | ಗುರು |
| ೨) | ಸೂಕ್ಷ್ಮತನು | ಚಿಲ್ಲಿಂಗ್ | ಲಿಂಗ |
| ೩) | ಕಾರಣತನು | ಚಿಜ್ಜಂಗಮ | ಜಂಗಮ |
| ೪) | ನಿರ್ಮಲತನು | ಚಿದ್ರಸ | ಪಾದೋದಕ |
| ೫) | ಆನಂದ ತನು | ಚಿತ್‌ಪ್ರಸಾದ | ಪ್ರಸಾದ |
| ೬) | ಚಿನ್ಮಯ ತನು | ಚಿದ್‌ವಿಭೂತಿ | ವಿಭೂತಿ |

೭) ಚಿದ್ರೂಪ ತನು ಚಿದ್ರುದ್ರಾಕ್ಷಿ ರುದ್ರಾಕ್ಷಿ
೮) ಶುದ್ಧ ತನು ಚಿನ್ಮಂತ್ರ ಮಂತ್ರ

ಮೂಲ ಚಿತ್‌ಚೈತನ್ಯ ವಸ್ತುವಿನ ತತ್ತ್ವಂಗಳ ವ್ಯಕ್ತಿಕರ ಭೇದದಿಂದ ಎಂಟು ಪ್ರಕಾರದ ತನು (ಅಂಗ) ಗಳಲ್ಲಿ ಅಷ್ಟಾವರಣಂಗಳು ಅವ್ಯಕ್ತವಿದ್ದದ್ದು ವ್ಯಕ್ತವಾಗುತ್ತವೆ.

ಇನ್ನು ಮೂಲ ಆತ್ಮಚೈತನ್ಯವು ಅಷ್ಟತನು ಸಂಬಂಧವಾಗಿ **ಅಷ್ಟಾತ್ಮಂಗಳು** ಪ್ರಕಾಶಗೊಳುತ್ತವೆ (೧) ಜೀವಾತ್ಮ (೨) ಅಂತರಾತ್ಮ (೩) ಪರಮ ಆತ್ಮ (೪) ನಿರ್ಮಲಾತ್ಮ (೫) ಶುದ್ಧಾತ್ಮ (೬) ಜ್ಞಾನಾತ್ಮ (೭) ಮಹಾತ್ಮ (೮) ಭೂತಾತ್ಮ. ಈ ಎಂಟು ಪ್ರಕಾರದ ಆತ್ಮರುಗಳು ಒಬ್ಬನೇ ಆತ್ಮನ ಆಯಾಯ ವ್ಯವಹಾರದ ಭೇದದಿಂದ ಉಂಟಾಗುತ್ತವೆ. ಇವುಗಳ ವಿವರವು ಚೆನ್ನಬಸವಣ್ಣನವರು ನಿರೂಪಿಸಿರುವ 'ಕರಣ ಹಸಿಗೆಯಲ್ಲಿ ಕಾಣಬಹುದಾಗಿದೆ.

**'ನಾನು' ಯಾರು** ? ಎಂಬುದು ಅತಿಮುಖ್ಯವಾದ ತಾತ್ವಿಕ ಪ್ರಶ್ನೆಗಳಲ್ಲಿ ಪ್ರಮುಖ ಪ್ರಶ್ನೆಯಾಗಿದೆ. ಇದನ್ನು ಗುರುಬಸವಣ್ಣನವರು ತಮ್ಮ ಅಂತರಂಗದ ಅಂತಃಪ್ರಜ್ಞೆ ಅರಿವನ್ನು ಜಾಗೃತಗೊಳಿಸಿಕೊಂಡು ಸ್ವಯಂಕೃತ ಗುರುವಾಗಿ 'ತನ್ನ ತಾನರಿದರೆ ತಾನೇ ದೇವ ನೋಡಾ ಕೂಡಲಸಂಗಮದೇವಾ' ಎಂದು ಕಂಡುಕೊಂಡಿದ್ದಾರೆ. ಆತ್ಮವೆಂದರೆ ದೇಹ, ಇಂದ್ರಿಯ, ಅಂತಃಕರಣಗಳಿಗೆಲ್ಲ ಮೂಲ ಚೈತನ್ಯವಾಗಿರುವ 'ಚಿದ್‌ವಸ್ತು' ಎಂಬುದು ಅರಿವಿಗೆ ಬರುತ್ತದೆ. ಅಂಗ(ದೇಹ) ಮತ್ತು ಆತ್ಮಗಳೆರಡಕ್ಕೂ ಅವಿನಾಭಾವ ಸಂಬಂಧವಿದೆ. ಇದನ್ನು ಅರಿವಿನ ಮಾರಿತಂದೆ ಎಂಬ ಶರಣ ತನ್ನ ವಚನದಲ್ಲಿ ಸ್ಪಷ್ಟವಾಗಿ ತಿಳಿಸುತ್ತಾರೆ–

ಅಂಗದ ಅಪ್ಯಾಯನವ ಆತ್ಮನರಿವಂತೆ
ಆತ್ಮನ ಸುಖ ದುಃಖವ ಲಿಂಗ ತಾಳುವಂತೆ
ಲಿಂಗಕ್ಕೂ ಆತ್ಮಕ್ಕೂ ಅನ್ಯ ಭಿನ್ನವಿಲ್ಲ
ಪೂಜಿಸುವ ಭಕ್ತ, ಪೂಜಿಸಿಕೊಂಬ ವಸ್ತು
ಉಭಯವೂ ಸದಾಶಿವಮೂರ್ತಿಲಿಂಗವು ತಾನೆ.

'ಆತ್ಮವು ಘಟ ಮಧ್ಯದಲ್ಲಿ ನಿಂದು, ಕೈಯಲ್ಲಿ ಮುಟ್ಟಿ, ಕಿವಿಯಲ್ಲಿ ಕೇಳಿ, ನಾಸಿಕದಲ್ಲಿ ವಾಸಿಸಿ, ಕಣ್ಣಿನಲ್ಲಿ ನೋಡಿ, ಬಾಯಲ್ಲಿ ಉಂಬಂತೆ, ಪಂಚೇಂದ್ರಿಯಕ್ಕೆ ತತ್ತಾಗಿ ಹಂಚಿಕೊಂಡಿಹುದು ಒಂದೇ ಆತ್ಮ' ಎಂದು ಜೀವಾತ್ಮನೇ ಜ್ಞಾತೃ, ಕರ್ತೃ ಮತ್ತು ಭೋಕ್ತೃ ಎಂದು ಶರಣ ತಿಳಿಸುತ್ತಾರೆ.

**೩) ಜಗತ್ತು (World) :**

ಬಸವಾದಿ ಶರಣರು ತಿಳಿಸುವ ಪ್ರಕಾರ ನಿಷ್ಕಲಲಿಂಗವು ನೆನಹು ಮಾತ್ರದಿಂದ

ಈ ಜಗತ್ತು ಚಿನ್ನಾದ–ಚಿದ್ಬಿಂದು–ಚಿತ್ಕಲಾ ಮೂಲಕ ಮಹಾಲಿಂಗವಾಗಿ ಹೊರಹೊಮ್ಮಿ, ಆ ಮಹಾಲಿಂಗ ತತ್ತ್ವದಿಂದ ಪಂಚಮಹಾಭೂತಂಗಳು ಅವಿರ್ಭವಿಸಿದವು.

ಮರನೊಳಗಣ ಪತ್ರೆ ಫಲಂಗಳು
ಮರಕಾಲವಶದಲ್ಲಿ ತೋರುವಂತೆ
ಹರನೊಳಗಣ ಪ್ರಕೃತಿ ಸ್ವಭಾವಂಗಳು
ಹರಭಾವದಿಚ್ಛೆಗೆ ತೋರುವವು
ಲೀಲೆಯಾದಡೆ ಉಮಾಪತಿ, ಲೀಲೆ ತಪ್ಪಿದಡೆ ಸ್ವಯಂಭು
ಗುಹೇಶ್ವರಾ

ಎಂದು ಶರಣ ಅಲ್ಲಮಪ್ರಭುದೇವರು ಹೇಳುತ್ತಾರೆ. ಪರಾತ್ಪರ ಪರವಸ್ತುವಿನ ಗರ್ಭದಲ್ಲಿ ಅವ್ಯಕ್ತವಾಗಿದ್ದುದೇ ಸೃಷ್ಟಿಯಾಗಿ ಪ್ರಕೃತಿ–ನಿಸರ್ಗ–ಜಗತ್ತು ಸ್ವರೂಪದಲ್ಲಿ ವ್ಯಕ್ತವಾಗಿದೆ. ವಚನಕಾರರ ಪ್ರಕಾರ ಪರಶಿವ ತತ್ತ್ವವೇ ಜಗತ್ತಾಗಿ ರೂಪತಾಳುತ್ತದೆ. ಈ ಜಗತ್ತು ಪರಶಿವನ ದೇಹ (ಅಂಗ)ವಾಗಿರುವುದು. ಆಕಾಶ, ವಾಯು, ತೇಜ, ಅಪ್ಪು, ಪೃಥ್ವಿ, ಎಂಬ ಪಂಚ ಮಹಾಭೂತಂಗಳು (Gross Elements) ಇವುಗಳ ಪಂಚೀಕರಣದ ಹಂಚಿಕೆಯಿಂದ ದೃಷ್ಟಿಗೆ ಕಾಣುವ ಜಗತ್ತು ರಚನೆಗೊಂಡಿದೆ. ಜಗತ್ತನ್ನು ಬ್ರಹ್ಮಾಂಡವೆಂದೂ ದೇಹವನ್ನು ಪಿಂಡಾಂಡವೆಂದೂ ದಾರ್ಶನಿಕರು ಕರೆಯುತ್ತಾ ಬಂದಿದ್ದಾರೆ. ಬ್ರಹ್ಮಾಂಡಗತವಾಗಿ ಮಹಾಲಿಂಗ ತತ್ತ್ವವಿದ್ದರೆ, ಪಿಂಡಾಂಡಗತವಾಗಿ ಚಿಲ್ಲಿಂಗ ತತ್ತ್ವವಿದೆ.

### ೪) ಮಹಾಲಿಂಗ (ದೇವ) –ಚಿಲ್ಲಿಂಗ (ಜೀವಾತ್ಮ) – ಜಗತ್ತು ಇವುಗಳ ಪರಸ್ಪರ ಸಂಬಂಧ:

ಬಸವಾದಿ ಶರಣರು ದೇವ–ಜೀವ–ಜಗತ್ತು (ಪರಮಾತ್ಮ–ಜೀವಾತ್ಮ–ಪ್ರಪಂಚ) ಇವನ್ನು ಮಹಾಲಿಂಗ–ಚಿಲ್ಲಿಂಗ–ಜಗತ್ತು ಎಂಬ ಪಾರಿಭಾಷಿಕ–ತಾತ್ವಿಕ ಶಬ್ದಗಳಲ್ಲಿ ವಿವೇಚನೆಗೈಯುತ್ತ ಇವುಗಳ ಪರಸ್ಪರ ಅವಿನಾಭಾವ ಸಂಬಂಧವನ್ನು ಹೇಳಿದ್ದಾರೆ.

ಶಿಲೆಯೊಳಗಣ ಪಾವಕನಂತೆ
ಉದಕದೊಳಗಣ ಪ್ರತಿಬಿಂಬದಂತೆ
ಬೀಜದೊಳಗಣ ವೃಕ್ಷದಂತೆ
ಶಬ್ದದೊಳಗಣ ನಿಶ್ಶಬ್ದದಂತೆ
ಗುಹೇಶ್ವರಾ ನಿಮ್ಮ ಶರಣಸಂಬಂಧ

ದೇವ–ಭಕ್ತರ ನಡುವಿನ ಸಂಬಂಧ ಅವಿನಾಭಾವ ಸಂಬಂಧವಾಗಿದೆ. ಕಲ್ಲಿನೊಳಗೆ ಅವ್ಯಕ್ತವಾಗಿರುವ ಅಗ್ನಿಯಂತೆ, ನೀರೊಳಗೆ ಅವ್ಯಕ್ತವಾಗಿರುವ ಪ್ರತಿಬಿಂಬದಂತೆ,

ಬೀಜದೊಳಗೆ ಅವ್ಯಕ್ತವಾಗಿರುವ ಮರದಂತೆ, ಆಹತನಾದ (ಶಬ್ದ)ದೊಳಗೆ ಅವ್ಯಕ್ತವಾಗಿರುವ ಅನಾಹತನಾದ (ನಿಃಶಬ್ದ) ದಂತೆ ಮಹಾಲಿಂಗ ಮತ್ತು ಚಿಲ್ಲಿಂಗ (ದೇವ-ಜೀವಾತ್ಮರ) ಸಂಬಂಧವಾಗಿದೆ.

ಸಮುದ್ರದೊಳಗೆ ನೊರೆತೆರೆಗಳು ನೆಗಳ್ದವೆಂದಡೆ
ಆ ಸಮುದ್ರದಿಂದ ಅನ್ಯವಪ್ಪವೆ ?
ನಿರ್ವಿಕಾರ ನಿತ್ಯ ನಿರಂಜನ ನಿರ್ಗುಣ ಪರಿಪೂರ್ಣ
ನಿರ್ವಿಕಲ್ಪ ಪರಬ್ರಹ್ಮಶಿವನಿಂದ ಜಗತ್ತು ಉದಯಿಸಿತ್ತು
ಎಂದಡೆ ಶಿವನಿಂದ ಅನ್ಯವೆನಬಹುದೆ ?
ಇಂತಪ್ಪ ಅರಿವು, ನೀವುಕೊಟ್ಟ ಸಮ್ಯಕ್ ಜ್ಞಾನಕ್ಕೆ
ಅರಿದಪ್ಪುದಯ್ಯ ಗುಹೇಶ್ವರಾ

ಪರವಸ್ತುವಿನ ಕ್ರಿಯಾರೂಪವಾದ ಪರಶಿವನಿಂದ ಜಗತ್ತು ಅವಿರ್ಭವಿಸಿರುವುದರಿಂದ ಪರಶಿವ ಚೇತನವು ಜಗತ್ತಿನ ಕಣ ಕಣದಲ್ಲಿಯೂ ಅವ್ಯಕ್ತವಾಗಿದೆ. ಸಮುದ್ರದೊಳಗೆ ನೊರೆತೆರೆಗಳು ಉದಯಿಸಿದರೂ, ಅವು ಸಮುದ್ರದಿಂದ ಭಿನ್ನವಾಗಿಲ್ಲ. ಅದರಂತೆ ದೇವ-ಜಗತ್ತಿನ ಸಂಬಂಧವಿದೆ.

ಒಟ್ಟಿನಲ್ಲಿ ಬಸವಾದಿ ಶರಣರ ವಚನಸಾಹಿತ್ಯವು ದೇವ-ಜೀವ-ಜಗತ್ತುಗಳ ಅವಿನಾಭಾವ ಸಂಬಂಧವನ್ನು ವಾಸ್ತವಿಕ-ತಾತ್ವಿಕನೆಲೆಯಲ್ಲಿ ವಿವರಿಸುತ್ತದೆ.

**೫) ಲಿಂಗಾಯತ ಧರ್ಮದ ಮೂಲ ತತ್ತ್ವಗಳು :**

ವಿಶ್ವಗುರು ಬಸವಣ್ಣನವರು ಅಖಂಡ ೧೨ ವರುಷಗಳ ಕಾಲ ಚಿಂತನ-ಮಂಥನದ ಮೂಲಕ ಇಷ್ಟಲಿಂಗ ಪರಂಪರೆಯ ವಿನೂತನವಾದ 'ಲಿಂಗಾಯತ ಧರ್ಮ'ವನ್ನು ಸ್ಥಾಪಿಸಿದರು. ಈ ಧರ್ಮವು ಜಾತಿರಹಿತ-ವರ್ಣರಹಿತ-ವರ್ಗರಹಿತ ಸ್ತ್ರೀ-ಪುರುಷರೆಂಬ ಲಿಂಗಭೇದರಹಿತ, ಸಂಸಾರಿ-ಸನ್ಯಾಸಿಯೆಂಬ ಆಶ್ರಮಭೇದರಹಿತವಾಗಿ ಸರ್ವರಿಗೂ 'ಇಷ್ಟಲಿಂಗ' ದೀಕ್ಷೆಯನ್ನು ಅಂದರೆ ಧಾರ್ಮಿಕ ಸಂಸ್ಕಾರವನ್ನು ಮುಕ್ತವಾಗಿ ಪಡೆಯಲು, ಸ್ವತಂತ್ರವಾಗಿ ಧರ್ಮಾಚರಣೆ ಮಾಡಲು ಅವಕಾಶ ಕಲ್ಪಿಸಿದ್ದರಿಂದ, ಇದು **'ಅನುಭವ ಮಂಟಪ'**ದ ಮೂಲಕ ೭೭೦ ಶರಣ-ಶರಣೆಯರಿಂದ ಮಾನ್ಯತೆ ಪಡೆದು ಚರಜಂಗಮರ ಮೂಲಕ ಭಾರತದಾದ್ಯಂತ ಪ್ರಸಿದ್ಧಿ ಪಡೆಯಿತು.

'ಅಂಗದ ಮೇಲೆ ಸದ್ಗುರು ಕಾರುಣ್ಯದ ಮೂಲಕ 'ಇಷ್ಟಲಿಂಗ'ವನ್ನು ಆಯತ ಮಾಡಿಕೊಂಡ ಭಕ್ತರಿಗೆ – **ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣ, ಷಟ್‌ಸ್ಥಲವೇ ಆತ್ಮವಾಗಿ**, ಲಿಂಗಾಂಗಯೋಗ ಸಾಧನೆಯ ಮೂಲಕ ಲಿಂಗಾಂಗ ಸಾಮರಸ್ಯ ಹೊಂದುವ ಮುಕ್ತ ಸ್ವಾತಂತ್ರ್ಯ ನೀಡಿತು'.

ಲಿಂಗಾಯತ ಧರ್ಮದ ಮೂಲ ತತ್ತ್ವಗಳು – (೧) ಅಷ್ಟಾವರಣ (೨) ಪಂಚಾಚಾರ (೩) ಷಟ್‌ಸ್ಥಲ (೪) ಲಿಂಗಾಂಗಯೋಗ.

**(೧) ಅಷ್ಟಾವರಣ :** ಪ್ರತಿಯೊಬ್ಬ ಸದ್ಭಕ್ತನ ಅಂತರಂಗದಲ್ಲಿ ಅರಿವು ಜಾಗೃತವಾಗಿ ಎಂಟು ನಿರಾಕಾರ ತತ್ತ್ವಗಳು ಭಕ್ತಾಂಗದಲ್ಲಿ ಕ್ರಿಯಾರೂಪದಲ್ಲಿ ಪ್ರಕಟವಾಗಿ 'ಅಷ್ಟಾವರಣ' ಎಂದು ವ್ಯಕ್ತಗೊಳ್ಳುವುದು. ಅವೇ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂಬ ಹೆಸರಿನಲ್ಲಿ ಅಷ್ಟಾವರಣವೆನಿಸಿವೆ. ಭಕ್ತನ ಅಷ್ಟತನುವಿನಲ್ಲಿ ಅಷ್ಟ ತತ್ತ್ವಗಳು ಚಿತ್‌ಚೈತನ್ಯವಾಗಿದ್ದು, ಅವನ್ನು ಭಕ್ತನು ಇಷ್ಟಲಿಂಗ ಪೂಜೆಯ ಮೂಲಕ ಅನುಭವಕ್ಕೆ ತಂದುಕೊಂಡು –ಅಷ್ಟಾವರಣ ಸ್ವರೂಪವೇ ತಾನಾಗುತ್ತಾನೆ.

**(೨) ಪಂಚಾಚಾರ :** ಲಿಂಗಾಯತ ಸದ್ಭಕ್ತನು ೫ ಪ್ರಕಾರದ ಆಚರಣೆಗಳನ್ನು ದಿನನಿತ್ಯದ ಬದುಕಿನಲ್ಲಿ ಸಹಜವಾಗಿ ತತ್ತ್ವನಿಷ್ಠೆಯಿಂದ ಆಚರಿಸುವನು. ಪಂಚಾಚಾರ–ಆಚರಣೆಯ ಕುರಿತು ತತ್ತ್ವಜ್ಞಾನಿ ಚೆನ್ನಬಸವಣ್ಣನವರು ತಮ್ಮದೊಂದು ವಚನದಲ್ಲಿ ಈ ಐದು ಆಚಾರಗಳ ಆಚರಣೆಯ ಚಿತ್ರಣವನ್ನೇ ನೀಡಿದ್ದಾರೆ –

ಲಿಂಗಾಚಾರ ಸದಾಚಾರ ಶಿವಾಚಾರ
ಗಣಾಚಾರ ಭೃತ್ಯಾಚಾರವೆಂಬ
ಪಂಚಾಚಾರದ ಆಚರಣೆಯೆಂತೆಂದಡೆ :
ಲಿಂಗವಲ್ಲದೆ ಅನ್ಯವನರಿಯದಿಹುದೇ **ಲಿಂಗಾಚಾರ**
ಸಜ್ಜನ ಕಾಯಕದಲ್ಲಿ ತಂದು
ಗುರುಲಿಂಗಜಂಗಮಕ್ಕೆ ನೀಡಿ
ಸತ್ಯಶುದ್ಧವಾಗಿಹುದೇ **ಸದಾಚಾರ**
ಶಿವಭಕ್ತರಲ್ಲಿ ಕುಲಗೋತ್ರ ಜಾತಿ ವರ್ಣ ಆಶ್ರಮವನರಸದೇ
ಅವರೊಕ್ಕುದ ಕೊಂಬುದೇ **ಶಿವಾಚಾರ**
ಶಿವಾಚಾರದ ನಿಂದೆಯ ಕೇಳದಿಹುದೇ **ಗಣಾಚಾರ**
ಶಿವಶರಣರೇ ಹಿರಿಯರಾಗಿ ತಾನೇ ಕಿರಿಯನಾಗಿ
ಸದ್‌ಭಕ್ತಿಯಿಂದ ಆಚರಿಸುವುದೇ **ಭೃತ್ಯಾಚಾರ**
ಇಂತೀ ಪಂಚಾಚಾರವುಳ್ಳ ಭಕ್ತರ
ಒಕ್ಕುದನಿಕ್ಕಿ ಸಲಹಯ್ಯಾ ಕೂಡಲಚನ್ನಸಂಗಮದೇವಾ

ವಿಶ್ವದಾಕಾರದಲ್ಲಿ ವಿಶ್ವಚೈತನ್ಯದ ಕುರುಹಾಗಿರುವ ಇಷ್ಟಲಿಂಗ ತತ್ತ್ವ ಅರಿತು ಪೂಜಿಸುವುದೇ ಏಕದೇವೋಪಾಸನೆ – ಲಿಂಗಾಚಾರವಾಗಿದೆ. ಸತ್ಯಶುದ್ಧ ಕಾಯಕ – ಭಕ್ತಿಯ ದಾಸೋಹಗೈವುದೇ ಸದಾಚಾರವಾಗಿದೆ. ಶಿವಭಕ್ತರಲ್ಲಿ ಜಾತಿ ಭೇದವೆಣಿಸದೇ ಎಲ್ಲರೂ

ಶಿವಸ್ವರೂಪಿಗಳೆಂದು ಕಾಣುವುದೇ ಶಿವಾಚಾರ. ಇಂತಪ್ಪ ಜಾತಿರಹಿತ ಶಿವಭಕ್ತರ ನಿಂದೆ ಕೇಳದಿರುವುದೇ ಗಣಾಚಾರ. ಶರಣರನ್ನು ಹಿರಿಯರಾಗಿ ಕಂಡು, ತಾನು ಕಿರಿಯನಾಗಿ ವಿನಯದಿಂದ ಕಿಂಕರನಾಗಿ ಸೇವೆ ಮಾಡುವುದೇ ಭೃತ್ಯಾಚಾರವಾಗಿದೆ. ಇದುವೇ ಲಿಂಗಾಯತರ ಧರ್ಮಾಚರಣೆಯಾಗಿದೆ.

**(೩) ಷಟ್‌ಸ್ಥಲ** : ಇಷ್ಟಲಿಂಗಧಾರಿ ಸದ್ಭಕ್ತನು ಇಷ್ಟಲಿಂಗೋಪಾಸನೆಯ ಮೂಲಕ ಅಂತರಂಗದಲ್ಲಿ ಆರು ಅವಸ್ಥೆಗಳಲ್ಲಿ – ಷಡಂಗಗಳಲ್ಲಿ ಷಡ್ಲಿಂಗೋಪಾಸನೆಯನ್ನು ಮಾಡುತ್ತಾ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಸ್ಥಲಗಳಲ್ಲಿ ಆರು ಭಕ್ತಿಗಳಿಂದ ಆರು ಲಿಂಗಗಳ ಸಾಮರಸ್ಯದಲ್ಲಿ ತನ್ಮಯನಾಗುತ್ತಾನೆ. ಇದನ್ನು ಅಲ್ಲಮಪ್ರಭುದೇವರ ಒಂದು ವಚನದಲ್ಲಿ ನೋಡಬಹುದಾಗಿದೆ.

ವಿಶ್ವಾಸದಿಂದ ಭಕ್ತನಾಗಿ
ಆ ವಿಶ್ವಾಸದೊಳಗಣ ನಿಷ್ಠೆಯಿಂದ ಮಾಹೇಶನಾಗಿ
ಆ ನಿಷ್ಠೆಯೊಳಗಣ ಅವಧಾನದಿಂದ ಪ್ರಸಾದಿಯಾಗಿ
ಆ ಅವಧಾನದೊಳಗಣ ಸ್ವಾನುಭಾವದಿಂದ ಪ್ರಾಣಲಿಂಗಿಯಾಗಿ
ಆ ಸ್ವಾನುಭಾವದೊಳಗಣ ಅರಿವಿನಿಂದ ಶರಣನಾಗಿ
ಆ ಅರಿವು ನಿಜದಲ್ಲಿ ಸಮರಸಭಾವವನ್ನೆದಿದ
ನಿರ್ಭಾವ ಪದದೊಳು ನಿಂದ ಭೇದವೇ ಐಕ್ಯಸ್ಥಲ
ಕಾಣಾ, ಗುಹೇಶ್ವರಾ.

**(೪) ಲಿಂಗಾಂಗಯೋಗ** : ಭಾರತೀಯ ಯೋಗ ಪರಂಪರೆಯಲ್ಲಿ ಶಿವಯೋಗ, ಹಠಯೋಗ, ರಾಜಯೋಗ, ಲಯಯೋಗ, ಮಂತ್ರಯೋಗ ಮೂಂತಾದ ಅನೇಕ ಯೋಗಗಳ ಸಾಧನೆ – ಸಿದ್ಧಿಗಳನ್ನು ಕಾಣುತ್ತೇವೆ. ಈ ಯೋಗಪರಂಪರೆಗೆ ೧೨ನೆಯ ಶತಮಾನದಲ್ಲಿ ಗುರುಬಸವಣ್ಣನವರು 'ಇಷ್ಟಲಿಂಗ' ವೆಂಬ ವಿನೂತನ ದೇವತತ್ತ್ವದ 'ಅರಿವಿನ ಕುರುಹು' ಕಂಡುಹಿಡಿದು, ಭಕ್ತಾಂಗಕ್ಕೆ ಇಷ್ಟಲಿಂಗವನು ಸಂಬಂಧಿಸಿದ್ದು, ಒಂದು ಹೊಸದಾದ 'ಲಿಂಗಾಂಗಯೋಗ' ಅರ್ಥಾತ್ 'ಬಸವಯೋಗ' ಸೇರ್ಪಡೆ-ಯಾಯಿತು.

ಭಕ್ತನು ಸ್ಥೂಲ ಶರೀರ (ತನು) ವಿನಲ್ಲಿ ಇಷ್ಟಲಿಂಗ, ಸೂಕ್ಷ್ಮಶರೀರ (ಮನ)ದಲ್ಲಿ ಪ್ರಾಣಲಿಂಗ, ಕಾರಣಶರೀರ (ಭಾವ)ದಲ್ಲಿ ಭಾವಲಿಂಗದ ಅನುಸಂಧಾನ–ಅನಿಮಿಷದೃಷ್ಟಿಯಿಂದ ಆರಂಭಗೊಂಡು ಅಂಗವೆಲ್ಲ ಲಿಂಗಮಯವಾದುದೇ 'ಲಿಂಗಾಂಗಯೋಗ' ಎನಿಸಿಕೊಂಡಿತು. ಈ ಲಿಂಗಾಂಗಯೋಗದ ಸಿದ್ಧಿಯೆಂದರೆ– ಬಸವಣ್ಣನವರು ಹೇಳುತ್ತಾರೆ –

ಲಿಂಗವ ಪೂಜಿಸಿ ಫಲವೇನಯ್ಯಾ !
ಸಮರತಿ ಸಮಕಳೆ ಸಮಸುಖ ಇಲ್ಲದನ್ನಕ್ಕ !
ಕೂಡಲಸಂಗಮದೇವರ ಪೂಜಿಸಿ
ನದಿಯೊಳಗೆ ನದಿ ಬೆರಸಿದಂತಾಗದನ್ನಕ್ಕ !

ಅಂಗ–ಲಿಂಗವು ಸಮರತಿ, ಸಮಕಳೆ, ಸಮಸುಖ ಅನುಭವಿಸುತ್ತಾ, ನದಿ–ನದಿಯಲ್ಲಿ ಬೆರೆತು 'ಸಂಗಮ'ವಾದ ಪರಮಾನಂದದ ಅನಿರ್ವಚನೀಯ ಅವಸ್ಥೆಯಾಗಿದೆ.

**೬) ತಾತ್ವಿಕ ಸಮಸ್ಯೆಗಳ ಕುರಿತು ವಚನಗಳಲ್ಲಿ ಪರಿಹಾರ :**

ಮಾನವ ಜೀವನದ ವ್ಯಷ್ಟಿ–ಸಮಷ್ಟಿಯ, ವ್ಯಕ್ತಿ–ಸಮಾಜದ, ಹಲವಾರು ಸಮಸ್ಯೆಗಳನ್ನು ಬಸವಾದಿ ಶರಣರು ತಮ್ಮ ಪ್ರಗತಿಪರ ವಿಚಾರಗಳ ನೆಲೆಯಲ್ಲಿ ತಾತ್ವಿಕ–ಸೈದ್ಧಾಂತಿಕ – ದಾರ್ಶನಿಕವಾಗಿ ಪರಿಹಾರ ಕಂಡುಕೊಂಡಿರುವುದನ್ನು ಅವರ ಸ್ವಾನುಭಾವದ 'ವಚನ' ಗಳಲ್ಲಿ ನೋಡಬಹುದಾಗಿದೆ.

**೧) ಬ್ರಹ್ಮೇವ ಸತ್ಯ –ಜಗನ್ಮಿಥ್ಯ ವಾದ ನಿರಸನಗೈದದ್ದು :**

'ಕಣ್ಣಿಗೆ ಕಾಣದ ದೇವರು ಸತ್ಯ– ಕಣ್ಣಿಗೆ ಕಾಣುವ ಜಗತ್ತು ಮಿಥ್ಯ' ಎಂಬ ಕಪೋಲಕಲ್ಪಿತ ವಾದವನ್ನು ಕೆಲವು ಪಂಡಿತರು – ಆಚಾರ್ಯರು ೧೨ ನೆಯ ಶತಮಾನದ ಪೂರ್ವದಲ್ಲಿ ಪ್ರಚಾರಕ್ಕೆ ತಂದಿದ್ದರು. ಈ ಜಗತ್ತು ನಶ್ವರ, ಈಶ್ವರನೊಬ್ಬನೇ ಶಾಶ್ವತ ಎಂಬ ವಾದವ ಪ್ರತಿಪಾದಿಸುತ್ತಿದ್ದುದನ್ನು ಕಂಡು ಬಸವಣ್ಣನವರು –

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ
ಕೂಡಲಸಂಗಮದೇವಾ

ಎಂದು ಜಗತ್ತು ದೇವರಿಂದ ಉದಯವಾದುದರಿಂದ, ಈ ಮರ್ತ್ಯಲೋಕ ಸತ್ಯವಾಗಿದೆ. ಪರಶಿವ ಸತ್ಯವೆನ್ನುವುದಾದರೆ ಪರಶಿವನ ಒಡಲಿನಿಂದ ಹೊರಹೊಮ್ಮಿದ ಈ ಜಗತ್ತು ಮಿಥ್ಯ ಹೇಗಾಗಲು ಸಾಧ್ಯ ! ದೇವರೂ ಸತ್ಯ, ಜಗತ್ತೂ ಸತ್ಯ ಎಂದೂ, ಲೌಕಿಕ – ಆಧ್ಯಾತ್ಮಿಕ ಜೀವನವನ್ನು ಇಲ್ಲಿ ಅಲ್ಲಿ ಎಂಬ ಮೌಲ್ಯಗಳ ನೆಲೆಯಲ್ಲಿ ಬದುಕಬೇಕು. ಶರಣನಾದವನು ಲೌಕಿಕ – ಪಾರಮಾರ್ಥಿಕ ಜೀವನವನ್ನು ಲಿಂಗಭೋಗೋಪಭೋಗಿ ಯಾಗಿ ಸಾಗಿಸಬೇಕು. ಜಗತ್ತು ಮಿಥ್ಯ, ಸಟೆ, ಸುಳ್ಳು ಎಂದು ಕಲ್ಪಿಸಿಕೊಂಡರೆ ಬಾಳುವೆಯೂ ಮಿಥ್ಯವಾಗುವುದು. ಆದ್ದರಿಂದ ಶರಣರಿಗೆ ಜಗವು–(ಪ್ರಪಂಚವು) ಸಟೆಯಾಗದೇ ದಿಟವಾಯಿತು.

**೨) ದೇವಲೋಕ – ಮರ್ತ್ಯಲೋಕ ಎಂಬ ಭೇದ ನಿರಸನಗೈದದ್ದು :**

ಬಸವಾದಿ ಶರಣರ ಪೂರ್ವದಲ್ಲಿ ದೇವಲೋಕ – ಮರ್ತ್ಯಲೋಕ ಎಂಬ ಕಲ್ಪನೆಗಳನ್ನು ಜನಮಾನಸದಲ್ಲಿ ಬೇರೂರಿಸಿದ್ದರು. ದೇವಲೋಕ ಅನಂತ ಆಗಸದಾಚೆ ಇದೆ. ಅಲ್ಲಿ ದೇವಾನುದೇವತೆಗಳು ವಾಸ ಮಾಡುತ್ತಿದ್ದಾರೆ ಎಂಬ ಪೌರಾಣಿಕ ಕಲ್ಪನೆಗಳನ್ನು ಹುಟ್ಟು ಹಾಕಿದ್ದರು. ಇದನ್ನು ವಾಸ್ತವವಾದಿಗಳೂ, ವಿಚಾರವಾದಿಗಳೂ ಆಗಿದ್ದ ಶರಣರು ಒಪ್ಪಲಿಲ್ಲ.

ದೇವಲೋಕ ಮರ್ತ್ಯಲೋಕವೆಂಬುದು
ಬೇರೆ ಮತ್ತುಂಟೆ ?
ಈ ಲೋಕದೊಳಗೆ ಮತ್ತೆ ಅನಂತಲೋಕ !
ಶಿವಲೋಕ ಶಿವಾಚಾರವಯ್ಯಾ
ಶಿವಭಕ್ತನಿರ್ದ ಠಾವೇ ದೇವಲೋಕ
ಭಕ್ತನಂಗಳವೆ ವಾರಣಾಸಿ
ಕಾಯವೇ ಕೈಲಾಸ, ಇದು ಸತ್ಯ
ಕೂಡಲಸಂಗಮದೇವಾ

ಎಂದು ಬಸವಣ್ಣವರು ಲೋಕಗಳ ಗೊಂದಲವನ್ನು ನಿರಸನಗೈದರು. ಇದಲ್ಲದೇ, ಮುಂಚಿನವರು ಕಲ್ಪಿಸಿಕೊಂಡಿದ್ದ ೧೪ ಲೋಕಗಳ ವಿಚಾರವಾಗಿಯೂ ತಮ್ಮ ವೈಚಾರಿಕತೆಯಿಂದ ನಿರಸನಗೈದು 'ಮರ್ತ್ಯಲೋಕ' ಒಂದೇ ಲೋಕವಿದೆ, ಇಲ್ಲಿ ಚೆನ್ನಾಗಿ ಬಾಳಬೇಕೆಂಬುದನ್ನು ಮಾನವ ಜನಾಂಗಕ್ಕೆ ಅರುಹಿದರು.

ಕೆಳಗೇಳು ಲೋಕ, ಮೇಲೇಳು ಲೋಕ
ಇಂತೀ ಹದಿನಾಲ್ಕು ಲೋಕಕ್ಕೆ ನೀನು ಒಡೆಯ
ನಿನಗೆ ಎನ್ನ ಪಾಲಕರು ಭಕ್ತರು ಒಡೆಯರು
ನಮ್ಮವರಿಂದ ನಿನ್ನ ಸೂತಕ ಹೋಯಿತ್ತಲ್ಲದೆ
ನಿನ್ನಿಂದ ಒಂದು ತೃಣವೂ ಮಡಿಯದು ಕಾಣಾ
ಕೂಡಲಸಂಗಮದೇವಾ.

ಕೆಳಗೇಳು ಲೋಕಗಳು – ಅತಲ, ವಿತಲ, ಸುತಲ, ರಸಾತಲ, ತಲಾತಲ, ಪಾತಾಲ, ಮಹಾತಲವೆಂದು ೭ ಅಧೋಲೋಕಗಳು ಹಾಗೂ ಮೇಲೇಳು ಲೋಕಗಳು – ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕವೆಂದು ೭ ಊರ್ಧ್ವಲೋಕಗಳು ಎಂಬ ಚತುರ್ದಶ ಭುವನಂಗಳ ಕಲ್ಪನೆ ಪುರಾಣಯುಗದಲ್ಲಿ ಬೆಳೆಸಿಬಿಟ್ಟಿದ್ದರು. ಇಂತಹ ಅವಾಸ್ತವಿಕ ಅಜ್ಞಾನಜನ್ಯ ಮೂಢನಂಬಿಕೆಗಳನ್ನು ಬಸವಾದಿ ಶರಣರು ತೊಡೆದುಹಾಕಿದರು.

೩) **ಪಾಪ – ಪುಣ್ಯ, ಸ್ವರ್ಗ – ನರಕಗಳ ಕಲ್ಪನೆಯ ನಿರಸನ :**

ಮುಗ್ಧ – ಅಜ್ಞ ಭಕ್ತರಲ್ಲಿ ಪಾಪ – ಪುಣ್ಯ, ಸ್ವರ್ಗ – ನರಕಗಳ ಭಯ ಹಾಗೂ ಆಸೆ ಹೊಗಿಸಿ, ಅವರನ್ನು ಅತಂತ್ರ – ಅಸಹಾಯಕ ಸ್ಥಿತಿಯಲ್ಲಿರಿಸಿದ್ದ ಸ್ವಾರ್ಥಿ –ಕರ್ಮಠರ ದುರ್ಬುದ್ಧಿಯನ್ನು ಖಂಡಿಸಿ, ಜನಸಾಮಾನ್ಯರಲ್ಲಿ ಬೇರೂರಿದ್ದ ಭ್ರಮೆಗಳನ್ನು ದೂರ ಮಾಡಿದರು ಬಸವಾದಿ ಶರಣರು.

(೧) ದೇವಲೋಕ ಮರ್ತ್ಯಲೋಕವೆಂಬುದು
ಬೇರಿಲ್ಲ ಕಾಣಿಭೋ !
ಸತ್ಯವ ನುಡಿವುದೇ ದೇವಲೋಕ
ಮಿಥ್ಯವ ನುಡಿವುದೇ ಮರ್ತ್ಯಲೋಕ
ಆಚಾರವೇ ಸ್ವರ್ಗ, ಅನಾಚಾರವೇ ನರಕ,
ಕೂಡಲಸಂಗಮದೇವಾ ನೀವೇ ಪ್ರಮಾಣು

(೨) ಪುಣ್ಯ ಪಾಪವೆಂಬವು ತಮ್ಮ ಇಷ್ಟವು ಕಂಡಿರೆ
ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ !
ದೇವಾ, ಭಕ್ತ ಜಯಾ ಜೀಯಾ ಎಂಬ ನುಡಿಯೊಳಗೆ
ಕೈಲಾಸವಿದ್ದುದೆ ಕೂಡಲಸಂಗಮದೇವಾ

ಸ್ಥಾನವಾಚಕಗೊಳಿಸಲ್ಪಟ್ಟಿದ್ದ ದೇವಲೋಕ, ಮರ್ತ್ಯಲೋಕ, ಸ್ವರ್ಗ – ನರಕ, ಕೈಲಾಸಗಳನ್ನು ನಿರಸನಗೈದು, ಜೀವನದ ಆಚರಣೆಯಲ್ಲಿ ಮೌಲ್ಯವಾಗಿಸಿದವರು ಶರಣರು.

ಪುಣ್ಯ – ಪಾಪ, ಸ್ವರ್ಗ – ನರಕಗಳ ಗೊಂದಲಕ್ಕೆ ಸಿಲುಕಿಕೊಳ್ಳದೇ ನಿಶ್ಚಿಂತರಾಗಿ ಬದುಕಬೇಕೆಂದು ಸಹಜ – ಸರಳವಾದ ಭಕ್ತಿ ಮಾರ್ಗವನ್ನು ತೋರಿದರು ಶರಣರು.

ಪುಣ್ಯವೆಂದರಿಯೆ, ಪಾಪವೆಂದರಿಯೆ.
ಸ್ವರ್ಗವೆಂದರಿಯೆ, ನರಕವೆಂದರಿಯೆ,
ಹರ ಹರ ಮಹಾದೇವ ಶಿವಶರಣೆಂದು
ಶುದ್ಧ ನೋಡಯ್ಯಾ
ಹರ ಹರ ಮಹಾದೇವ ಶಿವಶರಣೆಂದು
ಧನ್ಯ ನೋಡಯ್ಯಾ
ಕೂಡಲಸಂಗಮದೇವಯ್ಯಾ
ನಿಮ್ಮನರ್ಚಿಸಿ, ಪೂಜಿಸಿ ನಿಶ್ಚಿಂತನಾದೆ.

ಎಂದು ಗುರು ಬಸವಣ್ಣನವರು ಸ್ವತಃ ಆಚರಿಸಿ ತೋರಿದ ಶರಣ ಮಾರ್ಗವಿದು.

**೪) ಕರ್ಮಸಿದ್ಧಾಂತ ನಿರಸನ – ಕಾಯಕ ಸಿದ್ಧಾಂತ ಪ್ರತಿಪಾದನೆ :**

'ಈ ಜನ್ಮದಲ್ಲಿ ಮಾಡಿದ ಕರ್ಮದ ಫಲಗಳು ಮುಂದಿನ ಜನ್ಮದಲ್ಲಿ ಫಲಕೊಡುತ್ತವೆ' ಎಂಬ ವಿಚಾರವನ್ನು ಅಜ್ಞ – ಮುಗ್ಧ ಜನರಲ್ಲಿ ಬೇರೂರಿಸಿ, ಶೂದ್ರಾತಿ ಶೂದ್ರರು ನಿರಂತರವಾಗಿ ಮೇಲ್ಜಾತಿಯವರ, ಉಚ್ಚವರ್ಣೀಯರ ಸೇವೆಯಲ್ಲಿ ತೊಡಗುವಂತೆ ಮಾಡಿದ್ದ ಪುರೋಹಿತಶಾಹಿ – ಮನುಸ್ಮೃತಿಯ ಕರ್ಮಠ ಸಂಹಿತೆಯನ್ನು ವೈಚಾರಿಕವಾಗಿ –ತಾತ್ವಿಕವಾಗಿ ಖಂಡಿಸಿದ ಬಸವಾದಿ ಶರಣರು ಕರ್ಮಸಿದ್ಧಾಂತ – ಪೂರ್ವಜನ್ಮ – ಪುನರ್‌ಜನ್ಮಗಳಿಗೆ ಹೊಸದಾಗಿ ವ್ಯಾಖ್ಯೆಯನ್ನೇ ಬರೆದರು.

ಸುಖ ಬಂದರೆ ಪುಣ್ಯದ ಫಲವೆನ್ನೆನು
ದುಃಖ ಬಂದಡೆ ಪಾಪದ ಫಲವೆನ್ನೆನು
ನೀ ಮಾಡಿದಡೆ ಆಯಿತ್ತೆಂದೆನ್ನೆನು
ಕರ್ಮಕ್ಕೆ ಕರ್ತೃವೆ ಕಡೆಯೆಂದೆನ್ನೆನು
ಉದಾಸೀನವಿಡಿದು ಶರಣೆನ್ನೆನು
ಕೂಡಲಸಂಗಮದೇವಾ
ನೀ ಮಾಡಿದುಪದೇಶವು ಎನಗೀಪರಿಯಲಿ
ಸಂಸಾರವ ಸವೆಯ ಬಳಸುವೆನು

ಪ್ರತಿಯೊಬ್ಬರು ಸತ್ಯಶುದ್ಧ ಕಾಯಕ ಮಾಡುತ್ತಾ ಬದುಕು ಸಾರ್ಥಕ ಮಾಡಿಕೊಳ್ಳಬೇಕೆಂದು ಶರಣರು ಪಾಪ–ಪುಣ್ಯ, ಪೂರ್ವಜನ್ಮ–ಪುನರ್‌ಜನ್ಮಗಳ ಕರ್ಮಠದ ಸ್ವಾರ್ಥದ ಬಲೆಯಿಂದ ಜನಸಾಮಾನ್ಯರನ್ನು ಮುಕ್ತಗೊಳಿಸಿ, 'ನಡೆ–ನುಡಿ ಒಂದಾದರೆ ಇದೇ ಜನ್ಮ ಕಡೆ' ಯೆಂದು ಸಾರಿದರು.

ಮರೆವಿನ ಮಾನವಜನ್ಮ ಪೂರ್ವಜನ್ಮವಾದರೆ, ಅರಿವಿನ ಶರಣ ಜನ್ಮ ಪುನರ್‌ಜನ್ಮವೆಂದು ಇದೇ ಜೀವನದಲ್ಲಿ ಅದರ ನಿಜವಾದ ಅರ್ಥವನ್ನು ತಿಳಿಸಿ ಹೇಳಿದರು. ಸದ್ಗುರುವಿನ ಕಾರುಣ್ಯದಿಂದ ನರಜನ್ಮವು ಹರಜನ್ಮವಾಗಿ ಬದಲಾಗುವುದೇ ಪುನರ್ಜನ್ಮವೆಂದು ಶರಣೆ ಅಕ್ಕಮಹಾದೇವಿಯವರು ಹೇಳಿರುವುದನ್ನು ಕಾಣುತ್ತೇವೆ.

**೫) ದಾನ ಪದ್ಧತಿ ನಿರಸನ – ದಾಸೋಹ ಸಿದ್ಧಾಂತ ಪ್ರತಿಪಾದನೆ :**

ಬಸವಾದಿ ಶರಣರು ದಾನದ ಬದಲು ದಾಸೋಹ ಪದ್ಧತಿಯನ್ನು ತಾತ್ವಿಕವಾಗಿ ಚಿಂತನಗೈದು ಆಚರಣೆಗೆ ತಂದರು. 'ದಾನ' ಪದ್ಧತಿಯಲ್ಲಿ ನೀಡುವವನಲ್ಲಿ ಅಹಂ ಮೇಲರಿಮೆ ಹಾಗೂ ಪಡೆಯುವವನಲ್ಲಿ ಕೀಳರಿಮೆ, ದೈನ್ಯತೆ ಇರುವುದನ್ನು ಗಮನಿಸಿದ ಶರಣರು 'ದಾಸೋಹ' ಪದ್ಧತಿ ಜಾರಿಗೆ ತಂದರು.

ದಾನ ಪದ್ಧತಿಯು ಮಾನವ ಮಾನವರಲ್ಲಿ ವರ್ಗಭೇದ, ಮೇಲು - ಕೀಳು ಭಾವನೆ ಉಂಟು ಮಾಡಿತ್ತು. ಶರಣರು ದೇವನೊಬ್ಬನೇ **'ಮಹಾದಾನಿ'**, ಮಾನವರು ದೇವರಿಂದ ಬಂದಿರುವ ಸಂಪತ್ತನ್ನು ಪಡೆದು, ಸಮಾನತೆಯ ಕಿಂಕರಭಾವದಿಂದ ದಾಸೋಹ ಮಾಡಬೇಕೆಂದು ಹೇಳಿದರು. ದಾಸಿಮಯ್ಯ ಶರಣರು -

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ಸುಳಿದು ಬೀಸುವ ಗಾಳಿ ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥ ?

ಎಂದು ಮಾನವನಲ್ಲಿಯ ಅಹಂಭಾವ ತೆಗೆದುಹಾಕಿ, ದೇವರು ಕರುಣಿಸಿರುವ ಪ್ರಸಾದ ರೂಪದಲ್ಲಿರುವ ಸಂಪತ್ತನ್ನು ಸಮವಾಗಿ ಉಪಭೋಗಿಸಬೇಕು. ಬಲ್ಲಿದ ಕೊಟ್ಟ ದಾನ ಬಡವ ಸ್ವೀಕರಿಸಿ ದೀನನಾಗಿ 'ಬಲ್ಲಿದ' ನನ್ನು ಹೊಗಳಿದರೆ, ಮೂಗು ಕೊಟ್ಟವನನ್ನು ಮರೆತು ಮೂಗುತಿ ಕೊಟ್ಟವನನ್ನು ಹೊಗಳಿದಂತಾಗುತ್ತದೆ.

ವ್ಯಕ್ತಿಗಿಂತ ಸಮಾಜ, ವ್ಯಷ್ಟಿಗಿಂತ ಸಮಷ್ಟಿ ದೊಡ್ಡದು ಎಂದು ಅರಿತು, ಸದುವಿನಯದಿಂದ ಸಮಾಜರೂಪಿ ಜಂಗಮಕ್ಕೆ ತ್ರಿವಿಧ ದಾಸೋಹ ಮಾಡುವಲ್ಲಿ ಭೃತ್ಯಾಚಾರವಿರುತ್ತದೆ. ಅಂತೆಯೇ ಬಸವಣ್ಣನವರು-

ದಾಸೋಹವೆಂಬ ಸೋಹೆಗೊಂಡು ಹೋಗಿ
ಗುರುವ ಕಂಡೆ, ಲಿಂಗವ ಕಂಡೆ
ಜಂಗಮವ ಕಂಡೆ, ಪ್ರಸಾದವ ಕಂಡೆ
ಇಂತೀ ಚತುರ್ವಿಧ ಸಂಪನ್ನನಾದೆ ಕಾಣಾ
ಕೂಡಲಸಂಗಮದೇವಾ

ಎಂದು 'ದಾಸೋಹ' ಮಹತ್ವವನ್ನು ಈ ವಚನದ ಮೂಲಕ ತಿಳಿಸಿದ್ದಾರೆ.

**೬) 'ಮಾಯೆ' ಕುರಿತು ತಾತ್ತ್ವಿಕ ವಿಚಾರಗಳು :**

ಭಾರತೀಯ ದಾರ್ಶನಿಕರು 'ಮಾಯೆ' ಯ ಪರಿಕಲ್ಪನೆ (concept of maya)ಯನ್ನು ತಮ್ಮ ಮತ-ಸಿದ್ಧಾಂತಗಳಲ್ಲಿ ವಿವಿಧ ರೀತಿಯಿಂದ ಚರ್ಚಿಸಿದ್ದಾರೆ. ಪುರುಷ ಸಾಧಕನ ಅಧ್ಯಾತ್ಮ ಸಾಧನೆಯಲ್ಲಿ ಮಾಯೆಯು ಹೆಣ್ಣು - ಹೊನ್ನು - ಮಣ್ಣಿನ ರೂಪದಲ್ಲಿ ಬಂದು ಕಾಣುತ್ತದೆ, ಅಡ್ಡಿ ಆತಂಕವುಂಟು ಮಾಡುತ್ತದೆ. ಆದ್ದರಿಂದ ಇವುಗಳನ್ನು ತ್ಯಜಿಸಿ ಸಂಸಾರತ್ಯಾಗ ಮಾಡಿ, ಕಾಡಿಗೆ ಹೋಗಿ ತಪಸ್ಸು ಮಾಡಿ ಮಾಯೆಯನ್ನು ಗೆಲ್ಲಬೇಕೆಂದು ಜಪ-ತಪ-ಉಪವಾಸ-ದೇಹ ದಂಡನೆ ಮಾಡಿ

ಮಾಯೆಯನ್ನು ಗೆಲ್ಲಬೇಕೆಂದು ಬಹಳ ಕಷ್ಟಪಟ್ಟದ್ದನ್ನು ಕಾಣುತ್ತೇವೆ. ಜಗತ್‌ಸೃಷ್ಟಿಯ ಕಾಲಕ್ಕೆ ಪರಶಿವ-ಪರಾಶಕ್ತಿಯ ಕ್ರಿಯಾರೂಪವಾಗಿ ಪ್ರಕೃತಿ ರಚನೆಯಲ್ಲಿ ಕ್ರಿಯಾಶಕ್ತಿಯಾಗಿ 'ಜಗನ್ಮಾಯೆ' ವರ್ತಿಸುತ್ತದೆಯೆಂದೂ, ಅದೇ ರೂಪಾಂತರ ಹೊಂದಿ ಮಾನವರ ಬದುಕಿನಲ್ಲಿ ನಿರಂತರ ಆಟವಾಡಿಸುತ್ತದೆಯೆಂದು, ಈ ಮಾಯೆಯ ಗೆಲುವೊಡೆ ಯಾರಳವೂ ಅಲ್ಲ ಎಂದು ಹೇಳುತ್ತಾರೆ.

ಬಸವಾದಿ ಶರಣರು ಹೆಣ್ಣು ಹೊನ್ನು ಮಣ್ಣು ಮಾಯೆಯೆಂದು ಹೇಳಲಿಲ್ಲ. ಅಲ್ಲಮಪ್ರಭುದೇವರು ತಮ್ಮ ವಚನದಲ್ಲಿ –

ಹೊನ್ನು ಮಾಯೆಯೆಂಬರು, ಹೊನ್ನು ಮಾಯೆಯಲ್ಲ,
ಹೆಣ್ಣು ಮಾಯೆಯೆಂಬರು, ಹೆಣ್ಣು ಮಾಯೆಯಲ್ಲ,
ಮಣ್ಣು ಮಾಯೆಯೆಂಬರು, ಮಣ್ಣು ಮಾಯೆಯಲ್ಲ,
ಮನದ ಮುಂದಣ ಆಶೆಯೇ ಮಾಯೆ ಕಾಣಾ
ಗುಹೇಶ್ವರಾ

ಎಂದು ಕರೆದರು. ಸ್ತ್ರೀಯಾಗಿರಲಿ, ಪುರಷನಾಗಿರಲಿ ಪ್ರತಿಯೊಬ್ಬರೂ ತಮ್ಮ ಮನದ ಮುಂದೆ ಅಜ್ಞಾನವಾಗಿ ವರ್ತಿಸುವ ಮರೆವಿಗೆ, ಆಸೆಗೆ ಮಾಯೆ ಎಂದು ಕರೆದಿರುವರು. ಈ ಮನದ ಮುಂದಣ ಆಸೆ, ಮರವೆ, ಮಾಯೆ ಗೆಲ್ಲಬೇಕಾದರೆ ಸತ್ಯಶುದ್ಧ ಕಾಯಕ ನಿತ್ಯಲಿಂಗಾರ್ಚನೆ, ಭಕ್ತಿಯ ದಾಸೋಹಗೈಯುತ್ತಾ ಶರಣರಸಂಗದಲ್ಲಿ ಅನುಭಾವ ಆಲಿಸುತ್ತಾ, ಅರಿವಿನ ಶರಣಜೀವನ ನಡೆಸಿದರೆ ಮಾಯೆಯ ಗೆಲ್ಲಬಹುದು. ಅಂತಪ್ಪ ಶರಣರಿಗೆ 'ಮಾಯೆ' ಯೇ ಇರುವದಿಲ್ಲ. ಶರಣೆ ಅಕ್ಕಮಹಾದೇವಿತಾಯಿಯು ಹೇಳುತ್ತಾಳೆ–

ಪುರುಷನ ಮುಂದೆ ಮಾಯೆ
ಸ್ತ್ರೀಯೆಂಬ ಅಭಿಮಾನವಾಗಿ ಕಾಡುವುದು
ಸ್ತ್ರೀಯ ಮುಂದೆ ಮಾಯೆ
ಪುರುಷನೆಂಬ ಅಭಿಮಾನವಾಗಿ ಕಾಡುವುದು
ಲೋಕವೆಂಬ ಮಾಯೆಗೆ ಶರಣಚಾರಿತ್ರ್ಯ
ಮರುಳಾಗಿ ತೋರುವುದು.
ಚೆನ್ನಮಲ್ಲಿಕಾರ್ಜನನೊಲಿದ ಶರಣಂಗೆ
ಮಾಯೆಯಿಲ್ಲ, ಮರವೆಯಿಲ್ಲ, ಅಭಿಮಾನವೂ ಇಲ್ಲ.

ಶರಣರು ಆಸೆಯನ್ನು ಲಿಂಗಕ್ಕರ್ಪಿಸಿ, ನಿರಾಶಾವಂತರಾಗಿ ಬದುಕಿದರು. ಆಸೆಯೇ ದಾಸತ್ವ, ನಿರಾಶೆಯೇ ಈಶತ್ವ ಎಂಬುದನ್ನರಿತು ಮಾಯಾ-ಮೋಹರಹಿತವಾಗಿ

ಬದುಕಿದರು. ಅಂತೆಯೇ ಶರಣರನ್ನು ಮಾಯಾರಹಿತರು, 'ಮಾಯೆಗೆದ್ದ ಮಹಾಂತ' ರೆಂದು ಕರೆಯಲಾಗಿದೆ.

'ಮನ ಬಹಿರ್ಮುಖವಾದರೆ ಮಾಯಾಪ್ರಪಂಚಿ, ಮನ ಅಂತರ್‌ಮುಖವಾದರೆ ಅವಿರಳಜ್ಞಾನಿ' ಎಂದು ಶರಣರು ಹೇಳುತ್ತಾರೆ. ಮನ ಆಸೆಗೆ ಒಳಗಾಗಿ ಇಂದ್ರಿಯಂಗಳ ಭೋಗಲಾಲಸೆಗೆ ಬಹಿರಂಗವಾಗಿ ವರ್ತಿಸಿದರೆ ಅದುವೇ ಮಾಯಾಪ್ರಪಂಚ, ಅದೇ ಮನ ಅಂತರಂಗದ ಅರಿವಿಗೊಳಗಾಗಿ ಆತ್ಮಾನಂದದಲೋಲಾಡಿದರೆ ಆತ ಅವಿರಳಜ್ಞಾನಿಯೆನಿಸುತ್ತಾನೆ. ಇದು ಮಾಯೆಯನ್ನು ಸಹಜವಾಗಿ ಗೆಲ್ಲುವ ಶರಣರ ರೀತಿಯಾಗಿದೆ.

**೭) ವಚನ ತತ್ತ್ವಜ್ಞಾನವು ಜೀವನ ಪಲಾಯನವಾದಿಯಲ್ಲ :**

ಬಸವಾದಿ ಶರಣರು ಈ ಸಂಸಾರವು ಮಾಯೆಯೆಂದು, ಹೇಯವೆಂದು, ಕಷ್ಟದಾಯಕವೆಂದು ಭಯಪಟ್ಟು, ಹೆದರಿ ಬದುಕಿಗೆ ಬೆನ್ನು ತೋರಿ, ಹೇಡಿಗಳಂತೆ ಓಡಿಹೋಗುವ ಪಲಾಯನವಾದಿಗಳಲ್ಲ, 'ಕೂಡಲಸಂಗನ ಶರಣರು ಸ್ವತಂತ್ರಧೀರರು, ಅವರಿಗೆ ತೋರಲು ಪ್ರತಿಯಿಲ್ಲವೋ' ಎಂಬಂತೆ ಬದುಕಿದವರು.

ಸಂಸಾರವೆಂಬ ಅಡವಿಯಲ್ಲಿ
ಹುಲಿಯುಂಟು, ಕರಡಿಯುಂಟು ।
ಶರಣನಂಜ । ಮಹಾಧೀರ ಶರಣನಂಜ ॥
ಕೂಡಲಸಂಗನ ಶರಣ ನಿರ್ಭಯ.

ಅಂಜದೆ ಅಳುಕದೆ, ಎದೆಗುಂದದೆ ಧೈರ್ಯದಿಂದ ಜೀವನ ಬದುಕಿದವರು ಶರಣರು.

ಕಾಯದ ಕಳವಳಕ್ಕಂಜಿ ಕಾಯಯ್ಯ ಎನ್ನೆನು
ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು
ಯದ್‌ಭಾವಂ ತದ್ ಭವತಿ
ಉರಿ ಬರಲಿ, ಸಿರಿ ಬರಲಿ
ಬೇಕು ಬೇಡೆನ್ನೆನಯ್ಯಾ,
ಆನು ನಿಮ್ಮ ಹಾರೆನು, ಮಾನವರ ಬೇಡೆನು
ಆಣೆ, ನಿಮ್ಮಾಣೆ, ಕೂಡಲಸಂಗಮದೇವಾ

ಎಂದು ಸತ್ಯಶುದ್ಧ ಕಾಯಕ ಮಾಡುತ್ತಾ, ಸ್ವಾವಲಂಬನೆ, ಸ್ವಾಭಿಮಾನ, ಇದ್ದುದರಲ್ಲಿಯೇ ಸಂತೃಪ್ತಿಯ ಜೀವನ ಬದುಕಿದವರು ಶರಣರು.

ಜೋಳವಾಳಿಯಾನಲ್ಲ, ವೇಳೆವಾಳಿಯವನಾನಯ್ಯಾ
ಹಾಳು ಗೆಟ್ಟೋಡುವ ಆಳು ನಾನಲ್ಲವಯ್ಯಾ

ಕೇಳು, ಕೂಡಲಸಂಗಮದೇವಾ
ಮರಣವೇ ಮಹಾನವಮಿ.

ಬಸವಣ್ಣರು ಈ ವಚನದ ಮೂಲಕ ಕೊಡುವ ಸಂದೇಶವೆಂದರೆ – ಅನ್ನದ ಹಂಗಿಗರಾಗಿ ದುಡಿಯುವ ಆಳಾಗದೇ, ತತ್ತ್ವನಿಷ್ಠೆಗಾಗಿ ದುಡಿಯುವ ಆಳಾಗಬೇಕು. ಹೆದರಿ ಹೇಡಿಯಂತೆ ಓಡಿಹೋಗುವ ಆಳಾಗದೇ, ಮರಣ ಬಂದರೂ ಕೂಡಾ, ಅದನ್ನು ಮಹಾನವಮಿ ಹಬ್ಬವಾಗಿ ಸ್ವೀಕರಿಸುವ ಧೀರರಾಗಿ ಬದುಕಬೇಕು. ಇದು ಶರಣರು ತೋರಿರುವ, ಬದುಕಿನ ಜೀವನವಾದಿ ತತ್ತ್ವದರ್ಶನ – ಜೀವನದರ್ಶನವಾಗಿದೆ.

**೮) ಗೃಹಸ್ಥ ಜೀವನಾದರ್ಶದ ಜೀವನ ತತ್ತ್ವದರ್ಶನ :**

ಬಸವಾದಿ ಶರಣರು ನಿಸರ್ಗದತ್ತವಾದ ಸಹಜವಾದ ಸತಿ–ಪತಿ ದಾಂಪತ್ಯದ ಗೃಹಸ್ಥ ಜೀವನಾದರ್ಶದ ಜೀವನ ತತ್ತ್ವದರ್ಶನದ ಆದರ್ಶ ಬದುಕು ಬಾಳಲು ಕಲಿಸಿದರು. ಇಂದ್ರಿಯನಿಗ್ರಹ, ಅವಾಸ್ತವಿಕವಾದ ಒತ್ತಾಯದ ಸನ್ಯಾಸ ಜೀವನ ಹಲವಾರು ದೈಹಿಕ, ಮಾನಸಿಕ, ಸಮಾಜೋ–ಧಾರ್ಮಿಕ ಸಮಸ್ಯೆಗಳಿಗೆ, ಅನೈತಿಕತೆಗೆ ಕಾರಣವಾಗುತ್ತದೆಂಬು–ದನ್ನು ತಿಳಿದಿದ್ದರು. ಅಂತೆಯೇ ಬಸವಣ್ಣನವರು –

ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವವು ದೋಷಂಗಳು
ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು !
ಸತಿ ಪತಿ ರತಿಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು ?
ಸತಿ ಪತಿ ರತಿಭೋಗೋಪಭೋಗ ವಿಳಾಸವ
ಬಿಟ್ಟನೇ ಸಿಂಧು ಬಲ್ಲಾಳವನು ?
ನಿಮ್ಮ ಮುಟ್ಟಿ ಪರಧನ ಪರಸತಿಯರಿಗೆಳಸಿದಡೆ
ನಿಮ್ಮ ಚರಣಕ್ಕೆ ದೂರ ಕೂಡಸಂಗಮದೇವಾ.

ಶರಣರು ದಾಂಪತ್ಯಜೀವನ ಸಾಗಿಸುತ್ತಲೇ ವ್ಯಕ್ತಿ–ಕುಟುಂಬ–ಸಮಾಜ ಕಲ್ಯಾಣ ಕಾಯಕ ಮಾಡುತ್ತಲೇ ಆಧ್ಯಾತ್ಮ ಜೀವನದ ಪರಾಕಾಷ್ಠೆ ಮೋಕ್ಷವನ್ನು ಸಾಧಿಸುವರೆಂದು ಬಸವಣ್ಣನವರು ಸಾರಿದ್ದಾರೆ.

ಹುಳಿವಿಡಿದು ಘೃತ ಕಾಣ್ಬಂತೆ
ಅಕ್ಷರವಿಡಿದು ವಿದ್ಯವನರಿವಂತೆ
ಅನ್ನವ ಭೋಗಿಸಿ ಚೈತನ್ಯವ ಕೊಂಡಂತೆ
ಕೂಡಲಸಂಗನ ಶರಣರು
ಸತಿವಿಡಿದು ನಿರ್ವಾಣಸತಿ ಕಾಣ್ಬರು
ಕೇಳಾ ಪ್ರಭುವೆ

ಗೃಹಸ್ಥ ಜೀವನದಲ್ಲಿ ದಂಪತಿಗಳ ಸಂಬಂಧವು ಮೋಹವು ನಿರ್ಮೋಹವಾಗಿ, ಕಾಮವು ಮಮತೆಯಾಗಿ, ಪ್ರೀತಿಯು–ವಾತ್ಸಲ್ಯವಾಗಿ, ರತಿಯು–ವಿರತಿಯಾಗಿ ಬದಲಾವಣೆ ಹೊಂದುತ್ತಾ ಶರಣದಾಂಪತ್ಯವು 'ನೀರ ತಾವರೆಯಂತೆ' ನಿರ್ಲಿಪ್ತವಾಗುತ್ತದೆ. 'ಸಂಸಾರದಿಂದ ಸದ್ಗತಿಯುಂಟು' ಎಂಬ ಅನುಭಾವಿಗಳ ವಚನ ನಿದರ್ಶನವಾಗಿದೆ.

**೯) ಜಾತಿ ರಹಿತ ಸಮಾಜ ತತ್ತ್ವಜ್ಞಾನ (Castless social Philosophy) :**

ಭಾರತೀಯ ಸಮಾಜೋ–ಧಾರ್ಮಿಕರಂಗದಲ್ಲಿ ಬೇರೂರಿದ್ದ 'ವರ್ಣಾಶ್ರಮ ಧರ್ಮ–ಸಮಾಜದ ಜಾತಿ ಪದ್ಧತಿ' ಯ ಶೋಷಣೆ, ಒಡೆದಾಳುವ ಅಸಮಾನತೆಯ ವರ್ಗಭೇದದ ದುಷ್ಪರಿಣಾಮಗಳನ್ನು ಕಂಡು, ಅದರ ವಿರುದ್ಧ ಹೋರಾಟವನ್ನೇ ಮಾಡಿದರು.

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ
ಜಲ–ಬಿಂದುವಿನ ವ್ಯವಹಾರ ಒಂದೇ.
ಆಸೆಯಾಮಿಷ ರೋಷ ಹರುಷ ವಿಷಯಾದಿಗಳೆಲ್ಲಾ ಒಂದೇ
ಏನನೋದಿ, ಏನಕೇಳಿ, ಏನು ಫಲ ?
ಕುಲಜನೆಂಬುದಕ್ಕೆ ಆವುದು ದೃಷ್ಟ ?
ಸಪ್ತಧಾತುಸಮಂ ಪಿಂಡಂ ಸಮಯೋನಿ ಸಮುದ್ಭವಂ ।
ಆತ್ಮ ಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ ? ॥

ಕಾಸಿ ಕಮ್ಮಾರನಾದ, ಬೀಸಿ ಮಡಿವಳನಾದ
ಹಾಸನಿಕ್ಕಿ ಸಾಲಿಗನಾದ ವೇದವನೋದಿ ಹಾರುವನಾದ
ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ ?
ಇದು ಕಾರಣ ಕೂಡಲಸಂಗಮದೇವಾ
ಲಿಂಗಸ್ಥಲವನರಿದವನೇ ಕುಲಜನು.

ಮಾನವ–ಮಾನವರಲ್ಲಿ ಕಲ್ಪಿಸಲ್ಪಟ್ಟಿದ್ದ ವರ್ಣಭೇದ, ವರ್ಗಭೇದ, ಆಶ್ರಮಭೇದ, ಲಿಂಗಭೇದ, ಕುಲ–ಜಾತಿ ಭೇದಗಳನ್ನು ತಿರಸ್ಕರಿಸಿ, **'ಜಾತಿರಹಿತ ಸಮಾಜ'** ಕ್ಕೆ ಭದ್ರವಾದ ಬುನಾದಿ ಹಾಕಿದರು ಬಸವಣ್ಣನವರು. ಇದರ ತಳಹದಿಯ ಮೇಲೆ 'ಅನುಭವ ಮಂಟಪ' ವೆಂಬ ಪ್ರಜಾಪ್ರಭುತ್ವ ಮಾದರಿಯ ಸಮಾಜೋ–ಧಾರ್ಮಿಕ ಪಾರ್ಲಿಮೆಂಟ್ ಸ್ಥಾಪಿತವಾಗಿ, ೭೭೦ ಜನ ಶರಣ–ಶರಣೆಯರು ಸಂಸತ್‌ಸದಸ್ಯರಾಗಿ ಸಕಲಜೀವಾತ್ಮರ ಲೇಸಿನ ಮಾನವಕುಲ ಕಲ್ಯಾಣದ – 'ಸರ್ವರಿಗೂ ಸಮಭೂಮಿ–ಸಮಪಾಲು–ಸಮ ಬಾಳುವೆ' ಯ **'ಕಲ್ಯಾಣ ರಾಜ್ಯ'** ನಿರ್ಮಿಸಿದರು.

## ೧೦) ವಚನ ಸಾಹಿತ್ಯ–ಧಾರ್ಮಿಕ ತತ್ತ್ವಜ್ಞಾನ (Religious Philosophy) :

ಬಸವಾದಿ ಶರಣರು ಉದಯಿಸಿ ಬರುವ ಪೂರ್ವದಲ್ಲಿ ಭಾರತ ದೇಶದ ಧಾರ್ಮಿಕ ಪರಿಸ್ಥಿತಿಯು ಸಂಪೂರ್ಣ ಹದಗೆಟ್ಟಿತ್ತು. ದೇವಾಲಯ–ದೇವರುಗಳು ಪೂಜಾರಿ ಪುರೋಹಿತರ ಕರ್ಮಠ ಕಪಿಮುಷ್ಠಿಯಲ್ಲಿ ಸಿಲುಕಿದ್ದವು. ಧರ್ಮಾಚರಣೆಯ ಆಚಾರ–ವಿಚಾರಗಳು ಮರೆಯಾಗಿ ಹಿಂಸೆಯ ಕರ್ಮಕಾಂಡ, ಯಜ್ಞ–ಯಾಗ, ಹೋಮ–ಹವನಗಳು, ಪ್ರಾಣಿಬಲಿ, ನರಬಲಿ, ಕನ್ಯಾಬಲಿ ಮುಂತಾದ ಉಗ್ರತರವಾದ ಆಚರಣೆ ನಡೆದಿದ್ದವು. 'ಬಲಿಃ ಧರ್ಮಸ್ಯ ಮೂಲಮ್' ಎಂಬುದೇ ಜನಜನಿತ ನಂಬಿಕೆಯಾಗಿತ್ತು. ಇದನ್ನು ಮನಗಂಡು ಶರಣರು–ದಯೆ, ಪ್ರೇಮ, ಕರುಣೆ ಮಾನವೀಯತೆಯ ಮೌಲ್ಯಗಳ ಅನುಷ್ಠಾನಕ್ಕೆ ವಿನೂತನ 'ಧರ್ಮ' ಸ್ಥಾಪನೆಗೈದರು. ಗುರುಬಸವಣ್ಣನವರು –

ದಯವಿಲ್ಲದ ಧರ್ಮವದೇವುದಯ್ಯಾ ?
ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ

ಎಂದು 'ಧರ್ಮ ಸಂವಿಧಾನ' ಕ್ಕೆ **ದಯೆ**ಯನ್ನು ಬುನಾದಿಯಾಗಿ ಮಾಡಿಕೊಂಡರು. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಎಲ್ಲ ಸ್ತ್ರೀ–ಪುರುಷರಿಗೂ ಧಾರ್ಮಿಕ–ಸಂಸ್ಕಾರದ ಹಕ್ಕನ್ನು ನೀಡಿದರು. ಇಷ್ಟಲಿಂಗ ಸಂಸ್ಕಾರವು ಮಾನವ ನಿರ್ಮಿತವಾದ ಎಲ್ಲ ಪ್ರಕಾರದ ಭೇದಗಳ ಗೋಡೆಗಳನ್ನು ಕೆಡಹಿಹಾಕಿ ಸಮಾನತೆಯ–ಸ್ವಾವಲಂಬನೆಯ ಧಾರ್ಮಿಕ ಪೂಜೆಯ ಸ್ವಾತಂತ್ರ್ಯವನ್ನು ನೀಡಿತು.

ತನ್ನ ಹೊಟ್ಟೆಯ ಹಸಿವೆಗೆ ತಾನೆ 'ಅನ್ನ ಪ್ರಸಾದ' ಉಣ್ಣುವಂತೆ, ತನ್ನ **'ರತಿಸುಖ'** ವನು ತಾನೇ ಅನುಭವಿಸುವಂತೆ, ತನ್ನ ಆತ್ಮದ ಹಸಿವನ್ನು ತಾನೇ ಸ್ವತಃ ಇಷ್ಟಲಿಂಗ ಪೂಜೆ ಮಾಡಿಕೊಳ್ಳುವ ಮೂಲಕ ಲಿಂಗಾಂಗ ಸಾಮರಸ್ಯವನ್ನು ಆನಂದಿಸುವಂತೆ ಧಾರ್ಮಿಕವಾಗಿ ವ್ಯಕ್ತಿ ಸ್ವಾತಂತ್ರ್ಯ ಅನುಷ್ಠಾನಕ್ಕೆ ತಂದರು. ಇದರಿಂದಾಗಿ ದೇವ–ಭಕ್ತರ ನಡುವಿನ ದಲ್ಲಾಳಿಯಂತಿದ್ದ ಪೂಜಾರಿ–ಪುರೋಹಿತ ಮಧ್ಯಸ್ಥಗಾರರು ಇಲ್ಲವಾದರು. **'ಶರಣಸತಿ–ಲಿಂಗಪತಿ'** ಯರ ಆಧ್ಯಾತ್ಮ ಸಂಸಾರವು ಯಾವ ಅಡ್ಡಿ–ಆತಂಕಗಳಿಲ್ಲದೇ ಸಸಾರವಾಯಿತು. ದೇವರು–ದೇವಾಲಯಗಳ ಹೆಸರಿನಲ್ಲಿ ನಡೆಯುತ್ತಿದ್ದ ಶೋಷಣೆ ತಪ್ಪಿದವು.

## ೧೧) ವಚನ ಸಾಹಿತ್ಯ –ರಾಜಕೀಯ ತತ್ತ್ವಜ್ಞಾನ (Political Philosophy) :

ಬಸವಾದಿ ಶರಣರ ೧೧–೧೨ನೆಯ ಶತಮಾನದ ಭಾರತದಲ್ಲಿ ರಾಜರು, ಮಾಂಡಲಿಕರು, ಚಕ್ರವರ್ತಿಗಳ ಆಳ್ವಿಕೆಯ ಕಾಲ. ರಾಜ–ಮಹಾರಾಜರು ತಮ್ಮ ಅಧಿಕಾರ

ದಾಹದಿಂದ ಪರಸ್ಪರರ ಮೇಲೆ ದಂಡೆತ್ತಿ ಹೋಗಿ ಯುದ್ಧ ಮಾಡುವುದು, ಪ್ರಜೆಗಳು ನೆಮ್ಮದಿಯಿಲ್ಲದೇ ಬದುಕುವುದು ಸರ್ವೇಸಾಮಾನ್ಯವಾಗಿತ್ತು. ಇಂತಹ ರಾಜಕೀಯ ವ್ಯವಸ್ಥೆಯ ಕಾಲದಲ್ಲಿ ಬಸವಣ್ಣನವರು ಚಾಲುಕ್ಯ ಸಾಮ್ರಾಜ್ಯದ ರಾಜಧಾನಿ ಕಲ್ಯಾಣದ ಬಿಜ್ಜಳ ರಾಜನ ಆಸ್ಥಾನದಲ್ಲಿ ದಂಡನಾಯಕರಾಗಿ, ಪ್ರಧಾನಿಯಾಗಿ ಕಾಯಕ ಮಾಡುತ್ತಲೇ ಸಮಾಜೋ-ಧಾರ್ಮಿಕ ಕ್ರಾಂತಿಯ ರೂವಾರಿಗಳಾದರು. ಅನುಭವಮಂಟಪ ಸ್ಥಾಪಿಸಿ ಶರಣ ಸಂಕುಳ ಸೇರಿಸಿ, ಕಲ್ಯಾಣ ಸಾಮ್ರಾಜ್ಯವು ನಿಜಾರ್ಥದಲ್ಲಿ ಒಳಗೂ ಕಲ್ಯಾಣ ಹೊರಗೂ ಕಲ್ಯಾಣ ಎಂಬಂತೆ ೩೬ ವರುಷಗಳ ಕಾಲ ಆಡಳಿತ ನಿರ್ವಹಿಸಿದರು.

ಅಂದಿನ ಕಾಲದ ರಾಜಸತ್ತೆ - ಪುರೋಹಿತಸತ್ತೆಗಳನ್ನು ವಿಡಂಬನೆ ಮಾಡಿರುವುದು ಮಾರ್ಮಿಕವಾಗಿದೆ -

ಆನೆಯನೇರಿಕೊಂಡು ಹೋದಿರೆ ನೀವು
ಕುದುರೆಯನೇರಿಕೊಂಡು ಹೋದಿರೆ ನೀವು
ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರೆ ಅಣ್ಣಾ !
ಸತ್ಯದ ನಿಲವನರಿಯದೆ ಹೋದಿರಲ್ಲಾ !
ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಲ್ಲಾ !
ಅಹಂಕಾರವೆಂಬ ಸದಮದಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ !
ನಮ್ಮ ಕೂಡಲಸಂಗಮದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ !

ಇಂತಹ ರಾಜಕೀಯ ವ್ಯವಸ್ಥೆಯನ್ನು ವಿಡಂಬಿಸುತ್ತಲೇ, ಬಸವಣ್ಣನವರು ಒಬ್ಬ ರಾಜಕೀಯ ಮುತ್ಸದ್ಧಿಯಾಗಿ, ಕ್ರಿಯಾಶೀಲ ಪ್ರಧಾನಿಯಾಗಿ ಕಲ್ಯಾಣರಾಜ್ಯದ ಪ್ರತಿಯೊಬ್ಬ ಪ್ರಜೆಗೂ ಅನ್ನ, ಅರಿವೆ, ಆಶ್ರಯ, ಔಷಧ, ಅರಿವು (ಶಿಕ್ಷಣ) ವೆಂಬ **'ಶಿವಪಂಚಾಯತ'** ಗಳು ಸಿಗುವಂತೆ ಯೋಜನೆಗಳನ್ನು ರೂಪಿಸಿಕೊಟ್ಟರು.

ಬಸವಣ್ಣನವರು ಒಬ್ಬ ತಜ್ಞ ಅರ್ಥಶಾಸ್ತ್ರಜ್ಞರಾದುದರಿಂದ ನೂರಾರು **'ಕಾಯಕ'** ಗಳನ್ನು ರೂಪಿಸಿ ಜನತೆಗೆ, ದುಡಿಯುವ ಕೈಗಳಿಗೆ **'ಕಾಯಕ ಭಾಗ್ಯ'** ಕರುಣಿಸಿದರು. ಇದರಿಂದಾಗಿ ಕಾಯಕ ಜೀವಿಗಳು ದುಡಿದು ಗಳಿಸಿ ನೀಡುವವರಾದರೇ ವಿನಃ ಬೇಡುವವರಾಗಲಿಲ್ಲ, ಇಂತಹ ಸ್ವಾವಲಂಬನೆಯ ಸುಖೀರಾಜ್ಯ ನಿರ್ಮಾಣವಾಯಿತು. ರಾಜಕೀಯವಾಗಿ ಅಧಿಕಾರಿ ವರ್ಗದವರಲ್ಲಿ ಲಂಚ-ವಂಚನೆ, ಭ್ರಷ್ಟಾಚಾರಕ್ಕೆ ಅವಕಾಶವಿಲ್ಲದಂತೆ ರಾಜಕೀಯ ನೀತಿಯನ್ನು ರೂಪಿಸಿದ್ದರು.

ಬಸವಣ್ಣನವರು ರಾಜಕೀಯ ಮುತ್ಸದ್ಧಿಯಾಗಿದ್ದುದರಿಂದ - ಅವರು

ಕಲ್ಯಾಣದಲ್ಲಿರುವವರೆಗೆ ಅಖಂಡ ೩೬ ವರುಷಗಳ ಕಾಲ ಚಾಲುಕ್ಯ ಸಾಮ್ರಾಜ್ಯದ ವ್ಯಾಪ್ತಿಯಲ್ಲಿ ರಾಜಕೀಯವಾಗಿ ಯುದ್ಧಗಳಾಗಲಿ, ಪ್ರಜೆಗಳಲ್ಲಿ, ಮಾಂಡಲೀಕರಲ್ಲಿ ಅಸಮಾಧಾನಗಳಾಗಲೀ ಉಂಟಾಗಲಿಲ್ಲ.

**೧೨) ವಚನ ಸಾಹಿತ್ಯ – ಮೋಕ್ಷದ ಪರಿಕಲ್ಪನೆ (Concept of Liberation):**

ಭಾರತೀಯ ದಾರ್ಶನಿಕ ಪರಂಪರೆಯಲ್ಲಿ 'ಮೋಕ್ಷ'ದ ಪರಿಕಲ್ಪನೆಯು ಸನಾತನ ಶೈವ-ವೈದಿಕ ಧರ್ಮಗಳಲ್ಲಿ ಭಿನ್ನ ಭಿನ್ನ ರೀತಿಯಲ್ಲಿ ಬೆಳೆದು ಬಂದಿದೆ. ಶೈವರು-ಶಿವಲೋಕ ಆರ್ಥಾತ್ ಕೈಲಾಸದ ಕುರಿತು, ವೈದಿಕರು ವಿಷ್ಣುಲೋಕ ಅರ್ಥಾತ್ ವೈಕುಂಠದ ಕುರಿತು ಹೇಳುತ್ತಾರೆ.

ಶಿವನ ಭಕ್ತರು ಮತ್ತು ವಿಷ್ಣು ಭಕ್ತರು ತಮ್ಮ ತಮ್ಮ ಕರ್ಮಾನುಸಾರ ಮರಣದ ನಂತರ ತಮ್ಮ ತಮ್ಮ ಆರಾಧ್ಯ ದೈವಗಳ ಲೋಕಕ್ಕೆ ಹೋಗುತ್ತಾರೆ. ಮುಕ್ತಿಯಲ್ಲಿ ಎರಡು ವಿಧ – (೧) ಸದೇಹ ಮುಕ್ತಿ (೨) ವಿದೇಹ ಮುಕ್ತಿ. ಶಿವಭಕ್ತರು ಭಕ್ತಿಯ ಪರೀಕ್ಷೆಯಲ್ಲಿ ಪಾಸಾದ ನಂತರ ಶಿವನು ಪುಷ್ಪಕ ವಿಮಾನದಲ್ಲಿ ಅವರನ್ನು ಸದೇಹವಾಗಿಯೇ, ಕೆಲವು ಸಲ ಅವರ ಊರು ಸಹಿತವಾಗಿ ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಶಿವಭಕ್ತರು ಶಿವೈಕ್ಯ (ನಿಧನ) ರಾದ ನಂತರ ಅವರುಗಳ ಆತ್ಮಗಳು ಶಿವಲೋಕ (ಕೈಲಾಸಕ್ಕೆ) ಹೋಗುತ್ತವೆ. ಇದು ವಿದೇಹ ಮುಕ್ತಿ.

ಶಿವಭಕ್ತರು ಅಥವಾ ಅವರ ಆತ್ಮಗಳು ನಾಲ್ಕು ಪ್ರಕಾರದ ಫಲ ಪದವಿ ಹೊಂದುತ್ತಾರೆ. (೧) ಸಾಲೋಕ್ಯ (೨) ಸಾಮೀಪ್ಯ (೩) ಸಾರೂಪ್ಯ (೪) ಸಾಯುಜ್ಯ. ಇವರು ಈ ರೀತಿಯಾಗಿ ಶಿವಲೋಕದಲ್ಲಿ ಪುಣ್ಯ ತೀರುವವರೆಗೆ ಉಳಿಯುತ್ತಾರೆ. ಅವರು 'ಸಾಕ್ಷಾತ್ ಶಿವ' ಆಗಲಾರರು.

ಬಸವಾದಿ ಶರಣರು ಇಂತಹ ಶೈವದ ಮೋಕ್ಷ – ಮುಕ್ತಿ ಸಿದ್ಧಾಂತವನ್ನು ಒಪ್ಪುವದಿಲ್ಲ. ಅಲ್ಲಮಪ್ರಭುದೇವರು ತಮ್ಮದೊಂದು ವಚನದಲ್ಲಿ –

ಸತ್ತ ಬಳಿಕ ಮುಕ್ತಿಯ ಹಡೆದೆಹೆನೆಂದು
ಪೂಜಿಸ ಹೋದರೆ, ಆ ದೇವರೇನ ಕೊಡುವರೋ ?
ಸಾಯದೆ ನೋಯದೆ ಸ್ವತಂತ್ರನಾಗಿ
ಸಂದುಭೇದವಿಲ್ಲದಿಪ್ಪ ಗುಹೇಶ್ವರಾ ನಿಮ್ಮ ಶರಣ.

ಎಂದು ಶೈವರ ಮುಕ್ತಿಯ ಪರಿಕಲ್ಪನೆಯನ್ನು ನಿರಾಕರಿಸುತ್ತಾರೆ. ಅದೇ ರೀತಿ ಬಸವಣ್ಣನವರು ತಮ್ಮ ವಚನದಲ್ಲಿ –

ಭಕ್ತಿಯೆಂಬ ಪಿತ್ತ ತಲೆಗೇರಿ
ಕೈಲಾಸದ ಬಟ್ಟೆಯ ಹತ್ತುವ ವ್ಯರ್ಥರ ಕಂಡು

ಎನ್ನ ಮನ ನಾಚಿತ್ತು ನಾಚಿತ್ತು.
ಕೈಲಾಸವೆಂಬುದೇನೋ ? ಪೃಥ್ವಿಯ ಮೇಲೊಂದು ಮರಡಿ
ಆ ಪೃಥ್ವಿಗೆ ಲಯವುಂಟು.
ಆ ಮೊರಡಿಗೆಯೂ ಲಯವುಂಟು....
ಕೂಡಲಸಂಗ, ನಿಮ್ಮ ಶರಣ

ಎಂದು ಸದೇಹ ಮುಕ್ತಿಯನ್ನು ಅಲ್ಲಗಳೆದಿರುವುದನ್ನು ಕಾಣುತ್ತೇವೆ.

ಬಸವಾದಿ ಶರಣರು ಪ್ರತಿಪಾದಿಸುವ ಮೋಕ್ಷವೆಂದರೆ – **ಜೀವನ್ಮುಕ್ತಿ ಸಿದ್ಧಾಂತ ಅರ್ಥಾತ್ ಲಿಂಗಾಂಗ ಸಾಮರಸ್ಯ.** ಇಷ್ಟಲಿಂಗ ಸಂಸ್ಕಾರ ಹೊಂದಿರುವ ಲಿಂಗವಂತ ಭಕ್ತನು – ಅಷ್ಟಾವರಣಂಗಳ ಅಂಗವಾಗಿ, ಪಂಚಾಚಾರಗಳ ಪ್ರಾಣವಾಗಿ ಆಚರಿಸುತ್ತಾ ಷಟ್‌ಸ್ಥಲ ಸಾಧನೆಯ ಸಾಧಿಸುತ್ತಾ – ಷಡಂಗಗಳಲ್ಲಿ – ಷಡ್ಲಿಂಗೋಪಾಸನೆಯಲ್ಲಿ ನಿರತನಾಗಿ ಲಿಂಗಾಂಗ ಸಾಮರಸ್ಯದ ಪರಮಾನಂದರಲ್ಲಿರುತ್ತಾನೆ.

ಏನೆಂಬೆ ಏನೆಂಬೆ ಒಂದೆರಡಾದುದ ?
ಏನೆಂಬೆ ಏನೆಂಬೆ ಎರಡೊಂದಾದುದ ?
ಏನೆಂಬೆ ಏನೆಂಬೆ ಅವಿರಳ ಘನವ ?
ಮಹಾದಾನಿ ಕೂಡಲಸಂಗಮದೇವ
ತಾನೇ ಬಲ್ಲ.

ಎಂದು ಜೀವನ್ಮುಕ್ತಿ ಸ್ಥಿತಿಯ ಅನುಭವವನ್ನು ಬಸವಣ್ಣನವರು ವಿವರಿಸುತ್ತಾರೆ. ಶರಣೆ ಅಕ್ಕಮಹಾದೇವಿಯವರು – ಲಿಂಗಾಂಗ ಸಮರಸದ ಜೀವನ್ಮುಕ್ತಿ ಸ್ಥಿತಿಯನ್ನು ಹೀಗೆ ವರ್ಣಿಸುತ್ತಾರೆ –

ಲಿಂಗವೆನ್ನೆ ಲಿಂಗೈಕ್ಯವೆನ್ನೆ
ಸಂಗವೆನ್ನೆ ಸಮರಸವೆನ್ನೆ
ಆಯಿತ್ತೆನ್ನೆ ಆಗದೆನ್ನೆ
ನೀನೆನ್ನೆ ನಾನೆನ್ನೆ
ಚೆನ್ನಮಲ್ಲಿಕಾರ್ಜುನಯ್ಯಾ
ಲಿಂಗೈಕ್ಯವಾದ ಬಳಿಕ ಏನೂ ಎನ್ನೆ.

ಇದು ಲಿಂಗಾಂಗಯೋಗದ ಅಂತಿಮ ಅವಸ್ಥೆಯಾಗಿದೆಯೆಂಬುದನ್ನು ಕಾಣುತ್ತೇವೆ. ಬಯಲು (ಇಷ್ಟಲಿಂಗ), ಬಯಲಿನೊಳಗಣ ಬಯಲು (ಪ್ರಾಣಲಿಂಗ), ಮಹಾಬಯಲು (ಭಾವಲಿಂಗ) – ಈ ಲಿಂಗತ್ರಯವನಂಗವಿಸಿಕೊಂಡ ತನುತ್ರಯಗಳು (ತನು–ಮನ–ಭಾವ) ಲಿಂಗಾಂಗಸಮರಸದ ಪರಮಾನಂದದಲ್ಲಿರುವ ಸದ್ಭಕ್ತನೇ ಜೀವನ್ಮುಕ್ತನು. ಈ

ರೀತಿಯಾಗಿ ವಚನ ಸಾಹಿತ್ಯದಲ್ಲಿ ಮುಕ್ತಿಯ ಪರಿಕಲ್ಪನೆ ಭಾರತೀಯ ದಾರ್ಶನಿಕ ಪರಂಪರೆಗೆ ವಿನೂತನ ತತ್ತ್ವ ವಿಚಾರವಾಗಿದೆ.

**೧೩) ಸಮಾರೋಪ :**

ವಚನ ಸಾಹಿತ್ಯದಲ್ಲಿ ನಿರೂಪಿತವಾಗಿರುವ ತತ್ತ್ವಜ್ಞಾನ – ತತ್ತ್ವ ಮೀಮಾಂಸೆಯು ಸಹಸ್ರಾರು ವರುಷಗಳ ಭಾರತೀಯ ದಾರ್ಶನಿಕ ಪರಂಪರೆಗೆ ಹೊಸ ಆಯಾಮ ತಂದುಕೊಟ್ಟಿದೆ. ಸರ್ ಅರ್ಥರ್ ಮೈಲ್ಸ್ ಅವರ ಉಕ್ತಿಗಳನ್ನು ನೋಡುವುದಾದರೆ – 'Whatever legend may say about Basava the fact is pretty clear that he was the First Indian Free thinker. He might be called the Luther of India. (The Land of Lingam - 1933).

ಬಸವಾದಿ ಶರಣರ ವಚನಗಳಲ್ಲಿಯ ವಿಶ್ವಮಾನ್ಯ ಮೌಲ್ಯಗಳನ್ನು ಅರಿತು ಆಚರಿಸಿದರೆ ಇಡೀ ಜಗತ್ತು ಶಾಂತಿ–ನೆಮ್ಮದಿಯಿಂದ ಬಾಳಬಹುದು, ಉಳಿಯಬಹುದು, ಬಸವಾದಿ ಶರಣರು ಪ್ರಪಂಚದ ಎಲ್ಲ ದೇಶಗಳ ನಾಯಕರಿಗೆ ಸದ್ಬುದ್ಧಿ ಕರುಣಿಸಲಿ.

ಶರಣು – ಶರಣಾರ್ಥಿಗಳು.

**ಗ್ರಂಥ ಋಣ :**


೧. ಬಸವಯುಗದ ವಚನ ಮಹಾಸಂಪುಟ : ೧ – ಸಂ.ಡಾ.ಎಂ.ಎಂ.ಕಲಬುರ್ಗಿ
೨. ಬಸವೇಶ್ವರ ತತ್ತ್ವ ಮೀಮಾಂಸೆ – ಡಾ.ಎನ್.ಜಿ.ಮಹಾದೇವಪ್ಪ
೩. ಬಸವಣ್ಣನವರ ವಚನಗಳು – ಸಂ.ಡಾ.ಆರ್.ಸಿ.ಹಿರೇಮಠ
೪. ಅಲ್ಲಮಪ್ರಭುದೇವರ ವಚನ–ನಿರ್ವಚನ – ಶ್ರೀ ಸಿದ್ಧೇಶ್ವರ ಸ್ವಾಮಿಗಳು
೫. ವಚನ ಶಾಸ್ತ್ರಸಾರ ಭಾಗ – ೧, ೨, ೩ – ಸಂ.ಡಾ.ಫ.ಗು.ಹಳಕಟ್ಟಿ
೬. ಶಿವಶರಣೆಯರ ವಚನ ಸಂಪುಟ – ಸಂ.ಡಾ.ವೀರಣ್ಣ ರಾಜೂರ
೭. ಲಿಂಗಾಯತ ಧರ್ಮ–ಸಮಾಜತತ್ತ್ವಜ್ಞಾನ – ಪ್ರೊ.ಸಿದ್ಧಣ್ಣ ಲಂಗೋಟಿ
೮. ಕರಣ ಹಸಿಗೆ – ಸಂ.ಡಾ.ಇಮ್ಮಡಿ ಶಿವಬಸವಸ್ವಾಮಿ
೯. ವಚನ ಧರ್ಮಸಾರ – ಎಂ.ಆರ್.ಶ್ರೀನಿವಾಸಮೂರ್ತಿ
೧೦. ವಚನ ಸಾಹಿತ್ಯ – ಡಾ.ಎಂ.ಚಿದಾನಂದಮೂರ್ತಿ
೧೧. Anubhava Mantap - Rev. C.D.Uttagni
೧೨. A History of Philosophy - Frank Thilly
೧೩. ಬಸವಣ್ಣ–ಶರಣ ಗಣ ಸಂಘಟನೆ – ಡಾ. ವೀರಣ್ಣ ದಂಡೆ
೧೪. ವಚನ ತತ್ತ್ವ ಮೀಮಾಂಸೆ – ಪ್ರೊ. ಬಿ. ವಿರೂಪಾಕ್ಷಪ್ಪ
೧೫. ಜಗತ್ತಿಗೆ ಬಸವಧರ್ಮ – ಶ್ರೀ ರಂಜಾನ್ ದರ್ಗಾ.
೧೬. ಲಿಂಗಾಯತ ಧರ್ಮ–ದರ್ಶನ – ಪ್ರೊ.ಸಿದ್ಧಣ್ಣ ಲಂಗೋಟಿ

## ಪ್ರೊ. ಸಿದ್ಧಣ್ಣ ಲಂಗೋಟಿ ಅವರ ಕೃತಿಗಳು

| | | |
|---|---|---|
| ೧. | ಅಲ್ಲಮಪ್ರಭುದೇವರ ಜೀವನ ಸಂದೇಶ | ೧೯೭೯ |
| ೨. | ಅಕ್ಕಮಹಾದೇವಿಯ ಜೀವನ ದರ್ಶನ | ೧೯೭೯ |
| ೩. | ಲಿಂಗಾಯತ ಧರ್ಮ ಸಮಾಜ ತತ್ತ್ವಜ್ಞಾನ | ೧೯೭೯ |
| ೪. | ಲಿಂಗಾಯತ ಧರ್ಮದ ಮೂಲತತ್ವಗಳು | ೧೯೭೯ |
| ೫. | ಶಿವಯೋಗಿಣಿ ಅಕ್ಕನಾಗಮ್ಮ (ಸಂಪಾದಿತ) | ೧೯೭೯ |
| ೬. | ಗಣನಾಯಕ ಮಡಿವಾಳ ಮಾಚಿದೇವರು | ೧೯೭೯ |
| ೭. | ಮರಣವೇ ಮಹಾನವಮಿ | ೧೯೮೦ |
| ೮. | ಷಟಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರು | ೧೯೮೦ |
| ೯. | ಬಸವಬೆಳಗು (ಸಂಪಾದಿತ) | ೧೯೮೦ |
| ೧೦. | ಪ್ರಭುವಿನ ವಾಣಿಯಲ್ಲಿ ಬಸವಣ್ಣನವರು | ೧೯೮೦ |
| ೧೧. | ಲಿಂಗವಂತ ಧರ್ಮ ಪರಿಚಯ (ಸಂಪಾದಿತ) | ೧೯೮೧ |
| ೧೨. | ವಚನ ಸಂಶೋಧನ ಪಿತಾಮಹ ಫ.ಗು. ಹಳಕಟ್ಟಿಯವರು | ೧೯೮೧ |
| ೧೩. | ಬಸವಣ್ಣನವರ ಬಯ್ಗುಳಗಳು | ೧೯೮೧ |
| ೧೪. | ಅಕ್ಕ ಕಂಡ ಅಣ್ಣ | ೧೯೮೧ |
| ೧೫. | ಅಂಬಿಗರ ಚೌಡಯ್ಯ | ೧೯೮೧ |
| ೧೬. | ಶರಣರ ಶಿವರಾತ್ರಿ | ೧೯೮೨ |
| ೧೭. | ಸ್ವಾಮಿ ವಿವೇಕಾನಂದರ ದೇಶಭಕ್ತಿ ಕಲ್ಪನೆ | ೧೯೮೨ |
| ೧೮. | ಬಸವಾದಿ ಶರಣರ ವಚನಾಮೃತ (ಸಂಪಾದಿತ) | ೧೯೮೩ |
| ೧೯. | ವಿಭೂತಿ ನಿರ್ಮಾಣ ವಿಧಾನ | ೧೯೮೪ |
| ೨೦. | ಬಾಚಿಕಾಯಕದ ಬಸವಪ್ಪ ಕಾಳವ್ವೆ | ೧೯೮೪ |
| ೨೧. | ಶರಣರು ಹಾಗೂ ಮೂಢನಂಬಿಕೆಗಳು | ೧೯೮೪ |
| ೨೨. | ಇಷ್ಟಲಿಂಗ ನಿರ್ಮಾಣ ವಿಧಾನ | ೧೯೮೫ |
| ೨೩. | ಹಡಪದ ಅಪ್ಪಣ್ಣ ಲಿಂಗಮ್ಮ | ೧೯೮೫ |
| ೨೪. | ಶ್ರೀ ಗುರುಸಿದ್ಧ ಪ್ರಭುದೇವರು | ೧೯೮೫ |
| ೨೫. | ಇಷ್ಟಲಿಂಗ ಪೂಜಾ ವಿಧಾನ | ೧೯೮೫ |
| ೨೬. | ಫಕ್ಕೀರಪ್ಪ ಮುರಗೋಡ ಮಾಸ್ತರು | ೧೯೮೫ |
| ೨೭. | ಶಿವಶರಣರ ಕ್ರಾಂತಿ (ಕ.ವಿ.ವಿ. ಪ್ರಕಟಣೆ) | ೧೯೮೬ |
| ೨೮. | ವಿಶ್ವಗುರು ಬಸವಣ್ಣನವರ ವಚನಗಳು (ಸಂಪಾದಿತ) | ೧೯೮೬ |
| ೨೯. | ಕರ್ನಾಟಕ ಗಾಂಧಿ ಹರ್ಡೇಕರ ಮಂಜಪ್ಪನವರು | ೧೯೮೬ |
| ೩೦. | ಯುಗ ಪುರುಷ ಚೆನ್ನಬಸವ ಪಟ್ಟಾಧ್ಯಕ್ಷರು | ೧೯೮೭ |
| ೩೧. | ಬಸವದರ್ಶನ (ಸಂಪಾದಿತ) | ೧೯೮೭ |
| ೩೨. | ವಚನಸಾಹಿತ್ಯ : ತಾತ್ವಿಕ ವಿವೇಚನೆ | ೧೯೮೭ |
| ೩೩. | ವಿಶ್ವವಿಖ್ಯಾತ ತತ್ವಜ್ಞಾನಿ ಡಾ. ರಾಧಾಕೃಷ್ಣನ್‌ರು | ೧೯೮೮ |
| ೩೪. | ಧರ್ಮಗುರು ಜಗಜ್ಯೋತಿ ಬಸವಣ್ಣನವರು | ೧೯೮೮ |
| ೩೫. | ಅಲ್ಲಮ ಪ್ರಭುದೇವರ ವಚನಗಳು (ಸಂಪಾದಿತ) | ೧೯೮೯ |
| ೩೬. | ಬಸವಣ್ಣನವರು ಮತ್ತು ಜಾಗತಿಕ ಶಾಂತಿ | ೧೯೮೯ |
| ೩೭. | ಬಸವಭಕ್ತ ಘನಮಠ ಶಿವಯೋಗಿಗಳು | ೧೯೮೯ |
| ೩೮. | ಚೆನ್ನಬಸವಣ್ಣನವರ ವಚನಗಳು (ಸಂಪಾದಿತ) | ೧೯೮೯ |
| ೩೯. | ಬಸವಭಕ್ತ ಅಥಣಿ ಶಿವಯೋಗಿಗಳು | ೧೯೮೯ |
| ೪೦. | ದೇವದಾಸಿ ಪದ್ಧತಿ ವಿಮೋಚನೆ ಹಾಗೂ ಬಸವಣ್ಣನವರು | ೧೯೮೯ |
| ೪೧. | ಸಿದ್ಧರಾಮೇಶ್ವರ ವಚನಗಳು (ಸಂಪಾದಿತ) | ೧೯೯೦ |
| ೪೨. | ಡಾ. ಜಚನಿ ಅಂದು–ಇಂದು : ಒಂದು ವಿಮರ್ಶೆ | ೧೯೯೦ |
| ೪೩. | ಶ್ರೀ ಗುರುಬಸವ ಮಂಟಪ ನಡೆದು ಬಂದ ದಾರಿ | ೧೯೯೧ |

## ABOUT BASAVESHWAR

Whatever the legend may say about Basava, the fact is fully clear that he was the first Indian free-thinker. He might be called the martin Luther of India.

**- Arthur Miles**
(Land of lingam)

The vachana literature of Basaveshwar and his followers is a mine of mystical experiences. These mystics occupy a very high place among the great God-Realisers all over the world. They have expressed what they have actually experienced. One has to dive deep in the Vachana literature to reach the gold of mystical experience...

**-Gurudev R. D. Ranade**

One will be much surprised to know how closely Basava and his followers' description of the Universe and its creation resembles that of the modern cosmologists !. Reading and repeated thinking of the things contained in their vachanas may make our lives more noble and holy.

**-Shri Siddheshwar Swamiji**
(Jnyan Yogashram, Vijayapur.)

In the 12th Century A. D., even before Great Britain could think, the concepts or knowledge about democracy, human rights and gender equality which Basaveshwar (the saint, poet, philosopher and social reformer) had and wanted to bring in to practice is indeed, unparallel and splendid. The installation of the statue of Basaveshwar near 'British Parliament in London is in fact, matter of great honour.

**-John Burko, Speaker**
British Parliment (21-01-2013)



**ಪ್ರೊ. ಸಿದ್ಧಣ್ಣ ಲಂಗೋಟಿ** ಅವರು ಬಸವಭೂಮಿಯಾದ ವಿಜಯಪುರ ಜಿಲ್ಲೆಯ ಸಿಂದಗಿ ತಾಲೂಕಿನ ಚಾಂದಕವಠೆ ಗ್ರಾಮದ ಲಿಂಗಾಯತ ಕೃಷಿ ಕುಟುಂಬದಲ್ಲಿ ಜನಿಸಿ (೧೯೫೦). ಚಾಂದಕವಠೆ, ಕನ್ನೊಳ್ಳಿ ಗ್ರಾಮಗಳಲ್ಲಿ ಪ್ರಾಥಮಿಕ ಶಿಕ್ಷಣ, ಸಿಂದಗಿಯ ಹೆಚ್.ಜಿ. ಹೈಸ್ಕೂಲದಲ್ಲಿ ಮಾಧ್ಯಮಿಕ ಶಿಕ್ಷಣ, ವಿಜಯಪುರ ಬಿ.ಎಲ್.ಡಿ.ಇ. ಸಂಸ್ಥೆಯಲ್ಲಿ ಬಿ.ಎಸ್‌ಸಿ. ಪದವಿ ಶಿಕ್ಷಣ, ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ತತ್ತ್ವಜ್ಞಾನ, ಎಂ.ಎ. ಹಿಂದಿ, ಎಂ.ಎ. ಕನ್ನಡ, ಎಲ್‌ಎಲ್.ಬಿ. ಕಾನೂನು ಶಿಕ್ಷಣ, ಸಿ ವಾಯ್, ಇಡಿ ಯೋಗ ಶಿಕ್ಷಣ ಪಡೆದವರಾಗಿದ್ದಾರೆ.

ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದು, ಸಾಹಿತ್ಯಕೃಷಿ ಕೈಕೊಂಡಿದ್ದಾರೆ. ಭಾರತೀಯ ಹಾಗೂ ಪಾಶ್ಚಿಮಾತ್ಯ ತತ್ತ್ವಜ್ಞಾನ, ಚಿಂತಕರೂ, ಬಸವತತ್ತ್ವಜ್ಞಾನದ ಅನುಭಾವಿ ಲೇಖಕರೂ ಆಗಿರುವ ಸಿದ್ಧಣ್ಣ ಲಂಗೋಟಿಯವರು ೮೮ ಕ್ಕೂ ಮಿಕ್ಕಿ ಗ್ರಂಥಗಳ ರಚನೆ ಹಾಗೂ ಸಂಪಾದನೆ ಮಾಡಿದ್ದಾರೆ.

ಕ್ರಿ.ಶ. ೧೯೯೦ ರಲ್ಲಿ ಹಾಗೂ ಕ್ರಿ.ಶ. ೨೦೦೦ ಇಸ್ವಿಯಲ್ಲಿ ಪಾಶ್ಚಿಮಾತ್ಯ ಹಾಗೂ ಪ್ರಪಂಚದ ಪ್ರಮುಖ ದೇಶಗಳಾದ ಇಂಗ್ಲೆಂಡ, ಅಮೇರಿಕಾ, ಫ್ರಾನ್ಸ್, ಇಟಲಿ, ಜರ್ಮನಿ, ಕೆನಡಾ, ಆಸ್ಟ್ರಿಯಾ, ಹಾಲಂಡ, ಸಿಂಗಾಪುರ, ಅರಬ ರಾಷ್ಟ್ರಗಳ ಪ್ರವಾಸ ಕೈಕೊಂಡು ಬಸವತತ್ವಜ್ಞಾನ ಕುರಿತು ಉಪನ್ಯಾಸ ನೀಡಿ, ಬಸವ ತತ್ತ್ವ ಪ್ರಸಾರಗೈದು ಬಂದಿದ್ದಾರೆ.

೧೯೭೭ ರಲ್ಲಿ ಬಸವತತ್ವ ಪ್ರಸಾರ ಸಂಸ್ಥೆ ಸ್ಥಾಪಿಸಿ ಶರಣ ಫ.ಗು. ಹಳಕಟ್ಟಿಯವರ ಶಿವಾನುಭವ ಪತ್ರಿಕೆಗೆ ಮರುಜನ್ಮ ನೀಡಿದ್ದಾರೆ. ೧೯೮೬ ರಲ್ಲಿ ಹರ್ಡೇಕರ ಮಂಜಪ್ಪನವರ ಶತಮಾನೋತ್ಸವ ಆಚರಿಸಿ 'ಶರಣಸಂದೇಶ'ವನ್ನು 'ಬಸವಬೆಳಗು' ಹೆಸರಿನಲ್ಲಿ ಮರುಹುಟ್ಟಿಗೆ ಕಾರಣೀಕರ್ತರಾಗಿದ್ದಾರೆ. ೧೯೯೦ ರಲ್ಲಿ ಇಂಗ್ಲೆಂಡಿನಲ್ಲಿ 'ಬಸವ ಇಂಟರನ್ಯಾಶನಲ್ ಫೌಂಡೇಶನ್' ಪ್ರಾರಂಭಿಸಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದಾರೆ. ಚಿತ್ತರಗಿಯಲ್ಲಿ ೧೯೯೬ರಲ್ಲಿ ಬಸವಕೇಂದ್ರ ಸ್ಥಾಪಿಸಿದ್ದಾರೆ. ಇಳಕಲ್ಲ ಶರಣ ಸಿದ್ದಾಂತ ವಿದ್ಯಾಪೀಠದ ಸಂಚಾಲಕರಾಗಿ ೪೫ ವರುಷಗಳಿಂದ ಶಿವಾನುಭವ ಶಿಬಿರಗಳನ್ನು ಸಂಘಟಿಸಿದ್ದಾರೆ. 'ಜಗಜ್ಯೋತಿ ಬಸವೇಶ್ವರ' ವಚನಾಂಕಿತದಲ್ಲಿ ಸಾವಿರಾರು ವಚನಗಳನ್ನು ಬರೆದು ಆಧುನಿಕ ವಚನಕಾರರಲ್ಲಿ ಒಬ್ಬರಾಗಿದ್ದಾರೆ.

ಗದಗ–ಬೆಟಗೇರಿ

–ಅಂಬಿಗರ ಕುಮಾರಚೌಡಯ್ಯ
ಆಧುನಿಕ ವಚನಕಾರರು